# ಅಲಕ್ಷಿತ ವಚನಕಾರ್ತಿಯರ ವಚನಗಳ ಆಶಯ ಮತ್ತು ಅಭಿವ್ಯಕ್ತಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿ ಎಚ್.ಡಿ ಮಹಾಪ್ರಬಂಧ



ಸಂಶೋಧಕಿ
ಅಕ್ಕಮಹಾದೇವಿ ಆರ್.ಸರಗಣಾಚಾರಿ

ಮಾರ್ಗದರ್ಶಕರು
ಡಾ.ವ್ಹಿ. ಎಸ್.ಬಡಿಗೇರ





ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ನವೆಂಬರ್ ೨೦೦೧

# ಅಲಕ್ಷಿತ ವಚನಕಾರ್ತಿಯರ ವಚನಗಳ ಆಶಯ ಮತ್ತು ಅಭಿವ್ಯಕ್ತಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್. ಡಿ ಮಹಾಪ್ರಬಂಧ



ಸಂಶೋಧಕಿ

ಅಕ್ಕಮಹಾದೇವಿ ಆರ್.ಸರಗಣಾಚಾರಿ

ಮಾರ್ಗದರ್ಶಕರು

ಡಾ.ವ್ಹಿ.ಎಸ್. ಬಡಿಗೇರ





ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ನವೆಂಬರ್ ೨೦೦೧



75

## ಸಂಶೋಧಕಿಯ ಪ್ರಮಾಣ ಪತ್ರ

ಅಲಕ್ಷಿತ ವಚನಕಾರ್ತಿಯರ ವಚನಗಳ ಆಶಯ ಮತ್ತು ಅಭಿವ್ಯಕ್ತಿ ಎಂಬ ವಿಷಯದ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು *ಡಾ. ವ್ಹಿ.ಎಸ್.ಬಡಿಗೇರ* ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧದಲ್ಲಿ ಬರುವಂತಹ ಯಾವುದೇ ಅಂಶವನ್ನೂ ಈ ಮೊದಲು ಭಾಗಶಃ ಆಗಲಿ, ಪೂರ್ಣವಾಗಿ ಆಗಲಿ ಪ್ರಕಟಿಸಿರುವುದಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೨/೧೧/೨೦೦೧
ಸ್ಥಳ : ವಿದ್ಯಾರಣ್ಯ

ಅಕ್ಕಮಹಾದೇವಿ ಆರ್.ಸರಗಣಾಚಾರಿ
ಸಂಶೋಧಕಿ
ಭಾಷಾ ನಿಕಾಯ
ಕನ್ನಡ ವಿಶ್ವದ್ಯಾಲಯ, ಹಂಪಿ
ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

ಅಕ್ಕಮಹಾದೇವಿ ಆರ್.ಸರಗಣಾಚಾರಿ ಅವರು ಅಲಕ್ಷಿತ ವಚನಕಾರ್ತಿಯರ ವಚನಗಳ ಆಶಯ ಮತ್ತು ಅಭಿವ್ಯಕ್ತಿ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧದ ವಿಷಯವನ್ನು ಇದುವರೆಗೂ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೦-೧೧-೨೦೦೧
ಸ್ಥಳ : ವಿದ್ಯಾರಣ್ಯ

ಡಾ. ವ್ಹಿ.ಎಸ್.ಬಡಿಗೇರ
ಮಾರ್ಗದರ್ಶಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಕೃತಜ್ಞತೆಗಳು

ಇಂದು ಸ್ತ್ರೀ ತನ್ನ ದೌರ್ಬಲ್ಯ ಮತ್ತು ಪರಾಧೀನ ಬದುಕಿನ ಬಗ್ಗೆಅರಿತು ಜಾಗ್ರತಳಾಗಿದ್ದರೂ ತನ್ನ ಅಸ್ತಿತ್ವದ ನೆಲೆಗಳನ್ನು ಗುರುತಿಸಿಕೊಳ್ಳುವಲ್ಲಿ ವಿಫಲಗೊಳ್ಳುತ್ತಿರುವುದೇ ಹೆಚ್ಚು. ಇಂಥಹ ಸಂದರ್ಭದಲ್ಲಿ ಹನ್ನೆರಡನೆಯ ಶತಮಾನದ ಅದೂ ಅಲಕ್ಷಿತಬದುಕಿನ ನೆಲೆಯಿಂದ ಕಾಣಿಸಿಕೊಂಡ ಮಹಿಳೆಯರಾದ ಸೊಳೆ ಸಂಕವ್ವೆ, ಹಾದರ ಕಾಯಕದ ಗಂಗಮ್ಮ, ರೆಮ್ಮವ್ವೆ, ಕಾಳವ್ವೆಯಂತವರು ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯ ಮೆರೆದು ಸ್ವಾವಲಂಬಿಗಳಾಗಿ ಆತ್ಮಗೌರವದಿಂದಲೇ ಬದುಕಿ ಪಟ್ಟಭದ್ರ ಹಿತಾಶಕ್ತಿಗಳನ್ನು ಹಿಮ್ಮೆಟ್ಟಿಸಿದ್ದು ಇತಿಹಾಸ. ವ್ಯವಸ್ಥೆಯ ಅನಿವಾರ್ಯತೆಗಳನ್ನು ಪೂರೈಸುತ್ತಲೇ ತಮ್ಮ ಕೀಳಿಕರಣಗೊಂಡ ವೃತ್ತಿಗಳನ್ನು ಘನೀಕರಿಸುತ್ತಲೇ ತಮ್ಮ ಅಸ್ತಿತ್ವವನ್ನು ಕಂಡುಕೊಂಡು ಅಧ್ಯಾತ್ಮಿಕ ಮಹೋನ್ನತಿಯನ್ನು ಸಾಧಿಸಿಕೊಂಡ ಅಲಕ್ಷಿತ ವಚನಕಾರ್ತಿಯರು ನನ್ನ ಅಧ್ಯಯನಕ್ಕೆ ಕುತೂಹಲಕರ ಆಕರಗಳಾಗಿದ್ದಾರೆ.

ಇಂದು ವ್ಯಾಪಕವಾಗಿ ಅಧ್ಯಯನಕ್ಕೊಳಪಡುತ್ತಿರುವ ಮಹಿಳಾ ಸಂವೇದನೆಗಳ ಹಿನ್ನೆಲೆಯಲ್ಲಿ ನಾನೊಬ್ಬ ಮಹಿಳಾ ಅಧ್ಯಯನಕಾರ್ತಿಯಾಗಿ ಅಲಕ್ಷಿತ ವಚನಕಾರ್ತಿಯರ ಸಂವೇದನಾ ನೆಲೆಗಳನ್ನು ಅವರ ವಚನಗಳ ಮೂಲಕ ವಚನಾಂದೋಲನದಲ್ಲಿ ಕಾಣಿಸಿಕೊಂಡ ಆಂತರಿಕ ಹಾಗೂ ಬಾಹ್ಯ ನೆಲೆಗಳನ್ನು ಗುರುತಿಸಲು ಪ್ರಯತ್ನಿಸಿರುವೆನು.

ಅಧ್ಯಯನದ ಆಳ ಅರಿವುಗಳಿಲ್ಲದೆ ಇರುವ ನನಗೆ ಪ್ರತಿ ಹಂತದಲ್ಲಿ ಅಧ್ಯಯನದ ಮಜಲುಗಳನ್ನು ಸಹೃದಯದಿಂದಲೇ ತಿಳಿಸುತ್ತಾ ನನ್ನಲ್ಲಿರುವ ಕೀಳರಿಮೆ ಸಂಕೋಚದ ಭಾವನೆಗಳನ್ನು ಕಳೆದು ಅಧ್ಯಯನದಲ್ಲಿ ಆತ್ಮವಿಶ್ವಾಸ ಅಭಿರುಚಿ ಆಸಕ್ತಿಗಳನ್ನು ಬೆಳೆಸಿ ನನ್ನ ಬರವಣಿಗೆಯನ್ನು ತಿದ್ದುತ್ತಾ ಈ ಬರವಣಿಗೆಗೆ ಒಂದು ಚೌಕಟ್ಟನ್ನು ಒದಗಿಸಿ ನನ್ನಿಂದ ಇಂಥಹ ಮಹತ್ವದ ಸಾಧನೆ ಮಾಡಿಸಿದ ನನ್ನ ಮಾರ್ಗದರ್ಶಕರಾದ ಡಾ.ವೀರೇಶ ಬಡಿಗೇರ ಗುರುಗಳಿಗೆ ನಾನು ಅಜೀವ ಪರ್ಯಂತ ಚಿರಋಣಿಯಾಗಿರುವೆನು. ಅವರಿಗೆ ಎಷ್ಟು ಕೃತಜ್ಞತೆ ಹೇಳಿದರು ಸಾಲದು.

ಸಂಕೀರ್ಣಮಯ ಬದುಕಿನಲ್ಲೂ ಉತ್ತಮಿಕೆಯನ್ನೇ ಮೆರೆಯುತ್ತ ಸದಾ ಮಕ್ಕಳ ಶ್ರೇಯೋಭಿವೃದ್ಧಿಗಾಗಿಯೇ ಶ್ರಮಿಸುತ್ತಿರುವ ಮಾತಾ ಪಿತರನ್ನು ಸ್ಮರಿಸುತ್ತಾ ನನ್ನ ಅಧ್ಯಯನದಲ್ಲಿ ಸಹಕರಿಸಿದ ಡಾ.ಬಿ.ಕೆ.ಹಿರೇಮಠ, ಡಾ.ಮಂಜುನಾಥ ಬೇವಿನಕಟ್ಟಿ, ಚೆನ್ನವೀರಪ್ಪ, ಶ್ರೀಮತಿ ಅನಿತಾ ಬಡಿಗೇರ, ಮೀನಾಕ್ಷಿ-ಗೋವಿಂದ ಅವರಿಗೆಲ್ಲ ನಾನು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನಕ್ಕೆ ಅವಕಾಶ ಕಲ್ಪಿಸಿದ ಕನ್ನಡ ವಿಶ್ವವಿದ್ಯಾಲಯವನ್ನು ಸ್ಮರಿಸುತ್ತ ಅಧ್ಯಯನಕ್ಕೆ ಗ್ರಂಥಗಳನ್ನೊದಗಿಸಿದ ಕನ್ನಡ ವಿಶ್ವವಿದ್ಯಾಲಯದ ಗ್ರಂಥಪಾಲಕರಾದ ಶ್ರೀ ಜೆ.ಆರ್.ರಾಮಮೂರ್ತಿ ಮತ್ತು ಸಿಬ್ಬಂದಿ ವರ್ಗದವರಿಗೆಲ್ಲ ನಾನು ತುಂಬಾ ಉಪಕೃತಳಾಗಿರುವೆನು.

ಗಾದಿಗನೂರು ಸರಕಾರಿ ಪ್ರೌಢಶಾಲೆಯಲ್ಲಿ ಶಿಕ್ಷಕಿಯಾದ ನನಗೆ ಅಪಾರ ಕೆಲಸ ಕಾರ್ಯಗಳ ಮಧ್ಯೆಯೂ ಅಂತಃಕರಣದಿಂದ ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಮುಖ್ಯ ಗುರುಗಳಾದ ಶ್ರೀ ಟಿ.ತಿಪ್ಪೇಸ್ವಾಮಿ ಅವರಿಗೆ ಮತ್ತು ನನಗೆ ಅಧ್ಯಯನದ ಪ್ರತಿ ಹಂತದಲ್ಲಿ ಪ್ರೇರಣೆಯನ್ನಿಯುತ್ತಾ ಸಹಕರಿಸುತ್ತಾ ಬಂದಿರುವ ಸಹೋದ್ಯೋಗಿ ಬಂಧುಗಳಾದ ಶ್ರೀ ಎ.ಗೋಪಾಲರಾವ್, ಶ್ರೀ ಮರುಳ ಸಿದ್ಧೇಶ್ವರಯ್ಯ, ಶ್ರೀ ಎನ್.ಕುಮಾರಸ್ವಾಮಿ, ಶ್ರೀ ಎಂ.ಕುಮಾರಸ್ವಾಮಿ, ಶ್ರೀಮತಿ ಡಿ.ಕೆ.ಸುವಿಧಾ, ಎಂ.ರೇಣುಕಾ, ಕೆ.ಎಂ.ವೇದಾವತಿ, ಎಸ್.ಮಹಾಲಕ್ಷ್ಮಿ, ನಜೀನಾಬೇಗಂ ಇವರೆಲ್ಲರಿಗೂ ನಾನು ತುಂಬಾ ಕೃತಜ್ಞಳಾಗಿರುವೆನು.

ನನ್ನ ಬದುಕು ಮತ್ತು ಬರಹದುದ್ದಕ್ಕೂ ಪ್ರೋತ್ಸಾಹ ಪ್ರೇರಣೆಗಳನ್ನು ನೀಡುತ್ತಲೆ ಬಂದಿರುವ ಬಾಳ ಗೆಳೆಯ ಶ್ರೀ ಗುರುಲಿಂಗಯ್ಯನವರನ್ನು ನೆನೆಯದೆ ಇರಲಾರೆ. ನನ್ನ ಬರಹಕ್ಕೆ ಚೈತನ್ಯ ನೀಡಿದ ನನ್ನ ಮಗ ಅಕ್ಷಯ, ಅಣ್ಣ ಮಹಾಂತೇಶ, ತಮ್ಮ ರವಿ, ಮಾಮಾ ಪ್ರೊ. ಮಲ್ಲಿಕಾರ್ಜುನ ಪುರಾಣಿಕ, ಭಾವ ಶರಣಯ್ಯ ಶಿಕ್ಷಕರು, ಅಕ್ಕ ಲಲಿತ, ನಾದಿನಿ ಗುರಮ್ಮ ಇವರೆಲ್ಲರಿಗೂ ನಾನು ತುಂಬಾ ಉಪಕೃತಳಾಗಿರುವೆನು ಮತ್ತು ಪ್ರತ್ಯಕ್ಷವಾಗಿ ಪರೋಕ್ಷವಾಗಿ ನನಗೆ ಸಹಕರಿಸಿದ ಎಲ್ಲ ಬಂಧು ಮಿತ್ರರಿಗೆಲ್ಲ ನನ್ನ ಅನಂತ ವಂದನೆಗಳು.

ಅಕ್ಕಮಹಾದೇವಿ ಆರ್.ಸರಗಣಾಚಾರಿ

# ಪರಿವಿಡಿ

## ಉದ್ದೇಶ

**ಯಾ**ವುದೇ ಒಂದು ಸಾಹಿತ್ಯ ಅಥವಾ ಸಂಸ್ಕೃತಿಯ ರೂಪವನ್ನು ದುಂಡಾಗಿ ಗ್ರಹಿಸುವ ನೆಲೆಗಳು ಹಿಂದೆ ಸರಿದು ಅವುಗಳ ಬಹುಮುಖ ಸಂವೇದನೆಗಳನ್ನು ವಿವಿಧ ಆಯಾಮಗಳಲ್ಲಿ ಅಧ್ಯಯನಿಸುವ ಕೆಲಸ ಇಂದು ವ್ಯಾಪಕವಾಗುತ್ತಿವೆ. ದುಂಡಾಗಿ ಗ್ರಹಿಸುವ ನೆಲೆಗಳ ಹಿಂದಿನ ಅಪಾಯವೆಂದರೆ ಆ ಸಂಸ್ಕೃತಿಯೊಳಗಿನ ಸೂಕ್ಷ್ಮ ಸಂವೇದನೆಗಳ ಅಂತರಿಕ ಸಂಘರ್ಷಗಳು ಕೈತಪ್ಪಿ ಹೋಗುತ್ತವೆ. ವಚನ ಸಾಹಿತ್ಯವನ್ನು ವಚನ ಸಂಸ್ಕೃತಿ ಎಂದೆನ್ನುವ ಪರಿಕಲ್ಪನೆಯೇ ತನ್ನೊಳಗಿನ ಅನೇಕ ವೈರುಧ್ಯಗಳನ್ನು ಮರೆಮಾಚುತ್ತವೆ. ಹೀಗೆ ಸಂಸ್ಕೃತಿಯೊಂದನ್ನು ಅಧ್ಯಾತ್ಮಿಕ ಮೌಲ್ಯಗಳ ಪ್ರತಿರೂಪವೆಂದಾಗಲಿ ಆದರ್ಶೀಕೃತ ಸ್ವರೂಪವೆಂದಾಗಲಿ ಪರಿಭಾವಿಸುವ ತಿಳುವಳಿಕೆಯೆ ಏಕಮುಖವಾದ ಅಧ್ಯಯನದ ದಾರಿಯೊಂದನ್ನು ತೆರೆದಿಡುತ್ತದೆ.

ಅಪವರ್ಗೀಕರಣದ ಬಹುಮುಖ್ಯ ನೆಲೆಯಾಗಿ ಕಾಣುವ ಹನ್ನೆರಡನೆಯ ಶತಮಾನವು ವ್ಯಕ್ತಿ ಪ್ರಜ್ಞೆಯ ನೆಲೆಯ ಮೂಲಕ ಸಮೂಹ ಪ್ರಜ್ಞೆಯ ಹುಡುಕಾಟಕ್ಕೆ ಕಾರಣವಾಗಿದೆ. ಈ ಹುಡುಕಾಟ

ಒಂದು ಹೊಸ ಸಾಮಾಜಿಕ ಆಂದೋಲನಕ್ಕೆ ದಾರಿಯಾಯಿತು. ಗತದ ನೆನಪುಗಳೊಂದಿಗೆ ಪದೇ ಪದೇ ಸಂವಾದಕ್ಕಿಳಿಯುವ ಕ್ರಿಯೆಯು ಪರಂಪರೆಯ ಅರ್ಥಪೂರ್ಣ ನೆಲೆಗಳನ್ನು ಸಮಕಾಲೀನತೆಯೊಂದಿಗೆ ಹೊಸ ಅರ್ಥದೊಂದಿಗೆ ವಿಶ್ಲೇಷಿಸಿಕೊಳ್ಳುವುದೇ ಆಗಿದೆ. ಅಲ್ಲದೆ ವಚನ ಸಂಸ್ಕೃತಿಯಲ್ಲಿದ್ದ ಹಲವಾರು ಅಂತರಿಕ ವೈರುಧ್ಯಗಳೊಂದಿಗೆ ಅರ್ಥಮಾಡಿಕೊಳ್ಳುವುದು ಇದರಿಂದ ಸಾಧ್ಯವಾಗುತ್ತದೆ.

ಉಪೇಕ್ಷಿತ ಸಾಹಿತ್ಯ ಮತ್ತು ನೆಲೆಗಳಿಗೆ ನೆಲೆಗಳ ಅಧ್ಯಯನಕ್ಕೆ ಹೆಚ್ಚಿನ ಆದ್ಯತೆ ಸಿಗುತ್ತಿರುವ ಇಂದಿನ ಸಂದರ್ಭದಲ್ಲಿ ಅಲಕ್ಷಿತ ಮಹಿಳಾ ವಚನಕಾರ್ತಿಯರ ಬಗ್ಗೆ ತಿಳಿದು ಕೊಳ್ಳುವುದು ಬಹುಮುಖ್ಯವಾದ ಅವಶ್ಯಕತೆಯಾಗಿದೆ. ಇಂದು ಸಾಂಸ್ಕೃತಿಕ ಬದುಕನ್ನು ಆಳುತ್ತಿರುವ ಜಾಗತೀಕರಣದ ಫಲಿತಾಂಶಗಳು ತನ್ನ ಕಕ್ಷೆಗೆ ಬರದ ಹಾಗೂ ಉಪಯೋಗಕ್ಕೆ ಬಾರದ ಸಾಂಸ್ಕೃತಿಕ ಸ್ಮೃತಿಗಳನ್ನು ಕೀಳಿಕರಿಸುತ್ತಿರುವುದಲ್ಲದೆ ಅವುಗಳನ್ನು ನಾಶಗೊಳಿಸುವ ವಿನಾಶಕಾರಿ ಪ್ರವೃತ್ತಿಯನ್ನು ಹೊಂದಿವೆ. ಅದು ತನ್ನ ಆರ್ಥಿಕ ಹಾಗೂ ಸಾಂಸ್ಕೃತಿಕ ರಾಜಕಾರಣಗಳಿಂದ ಹುಟ್ಟು ಹಾಕುತ್ತಿರುವ ಏಕಮುಖಿ ಮತ್ತು ಪ್ರತಿಷ್ಠಿತ ಜೀವನ ಕ್ರಮಗಳು ಬಹುಮುಖ ಸಂವೇದನೆವುಳ್ಳ ಸಮುದಾಯ ಬದುಕನ್ನು ಉಪೇಕ್ಷೆಗೆ ಒಳಪಡಿಸುತ್ತಿದೆ. ಇಂಥಹ ಅವಶ್ಯಕತೆಗಳು ಸ್ಥಳೀಯ ಸಂಸ್ಕೃತಿಗಳಲ್ಲಿ ತನ್ನ ಐಡೆಂಟಿಟಿಯನ್ನು ಉಳಿಸಿಕೊಳ್ಳುವ ಅನಿವಾರ್ಯತೆಯನ್ನು ತಂದೊಡ್ಡುತ್ತಿವೆ. ಈ ಹಿನ್ನೆಲೆಯಲ್ಲಿ ವಚನಸಾಹಿತ್ಯದ ಬಹು ಮುಖ್ಯ ಭಾಗವಾಗಿ ಬರುವ ಅಲಕ್ಷಿತ ವಚನಕಾರ್ತಿಯರ ಆಶಯ ಮತ್ತು ಅಭಿವ್ಯಕ್ತಿಯ ಅಧ್ಯಯನ ಔಚಿತ್ಯಪೂರ್ಣ ಎನಿಸುತ್ತದೆ.

ಈ ವಚನಕಾರ್ತಿಯರು ಹಲವಾರು ರೀತಿಯಿಂದ ಉಪೇಕ್ಷೆಗೊಳಗಾದ ಸಂಗತಿಗಳು ನಮ್ಮ ಗ್ರಹಿಕೆಗೆ ಬರುತ್ತವೆ. ಸ್ತ್ರೀ ಎಂಬ ಕಾರಣಕ್ಕಾಗಿ ಕೀಳು ಕುಲದವರೆನ್ನುವ ಕಾರಣಕ್ಕಾಗಿ ಉಂಟಾದ ಉಪೇಕ್ಷೆ ಇರಬಹುದು ಅಥವಾ ಅಧ್ಯಯನಕಾರರ ಏಕಮುಖಿ ವ್ಯಾಖ್ಯಾನಗಳು ಇದಕ್ಕೆ ಕಾರಣವಾಗಿರಬಹುದು. ಹೀಗೆ ನಾನಾ ರೀತಿಯಲ್ಲಿ ಈ ಉಪೇಕ್ಷೆಯ ನೆಲೆಗಳನ್ನು ಗುರುತಿಸಬಹುದು. ನನ್ನ ಮಟ್ಟಿಗೆ ಈ ಅಲಕ್ಷಿತ ವಚನಕಾರ್ತಿಯರು ವಚನಾಂದೋಲನದ ಒಳಗಡೆಯೇ ತೀವ್ರ ಬಂಡಾಯ ಪ್ರಜ್ಞೆಯುಳ್ಳ ಮತ್ತು ವ್ಯಕ್ತಿ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರಕ್ಕಾಗಿ ದಿಟ್ಟ ಹೆಜ್ಜೆ ಇಡುವ ಉಗ್ರ ಮಹಿಳಾವಾದಿಗಳಾಗಿ ಕಾಣಿಸುತ್ತಾರೆ. ಅವರ ವಚನಗಳನ್ನು ಅಧ್ಯಯಿನಿಸಲು ಇಂಥ ನೆಲೆಗಳು ಬಹುಮುಖ್ಯ ಮಾರ್ಗಸೂಚಿ ಗಳಾಗಿವೆ.

ವಚನ ಚಳುವಳಿಯು ಅಭಿವ್ಯಕ್ತಿ ಸ್ವಾತಂತ್ರ್ಯದ ದೃಷ್ಟಿಯಿಂದ ಒಂದು ಹೊಸ ಆಂದೋಲನವನ್ನೇ ಹುಟ್ಟು ಹಾಕಿತು. ಇದರಿಂದಾಗಿ ಹಲವಾರು ಕೆಳವರ್ಗದ ಸಮುದಾಯಗಳ ನಾಲಿಗೆಗೆ ಬಲಬಂದಂತಾಯಿತು. ಜಾತಿ, ವರ್ಗ, ವರ್ಣಭೇದಗಳಂತಹ ವ್ಯಕ್ತಿ ತಾರತಮ್ಯಗಳ ಮೂಲಕ ಅಮೂಲ್ಯವಾದ ಮಾನವ ಸಂಪನ್ಮೂಲವು ಛಿದ್ರವಾಗುವುದು ತಪ್ಪಿದಂತಾಯಿತು. ಮಾತನಾಡಲು ಭಯಪಡುವ ಸಂಧಿಗ್ಧ ಸ್ಥಿತಿಯಲ್ಲಿದ್ದಂತಹ ಸಮುದಾಯಗಳು ತನ್ನಲ್ಲಿ ಅಭಿವ್ಯಕ್ತಿ ಸಾಮರ್ಥ್ಯವನ್ನು ಕರಾರುವಕ್ಕಾಗಿ ಬದುಕಿನ ದಿಟ್ಟ ಅನುಭವಗಳ ಹಿನ್ನೆಲೆಯಲ್ಲಿ ವ್ಯಕ್ತಪಡಿಸುವಂತಾಯಿತು. ಏಕಕಾಲಕ್ಕೆ ಈ ಚಳುವಳಿ ಪುರುಷ ಮತ್ತು ಸ್ತ್ರೀಯರಲ್ಲಿ ಜೈವಿಕ ಅಭೇದವನ್ನು ವೈಚಾರಿಕ ಮತ್ತು ತಾತ್ವಿಕ ನೆಲೆಗಳನ್ನು ಹುಟ್ಟುಹಾಕಿತು. ಸ್ತ್ರೀಗೆ ವಿದ್ಯೆ ಮತ್ತು ಧಾರ್ಮಿಕಾಚರಣೆಗಳಂತಹ ಆಚರಣಾತ್ಮಕ ಮತ್ತು ಧಾರ್ಮಿಕ ವಲಯಗಳಲ್ಲಿ ನಿಷೇಧ ಹೇರಿದ ಪ್ರತಿಗಾಮಿ ಶಕ್ತಿಗಳ ವಿರುದ್ಧ ಸ್ತ್ರೀ ಸಮುದಾಯ ತನ್ನ ಪ್ರಖರ ವಿಚಾರಧಾರೆಗಳಿಂದ ಪ್ರತಿಭಟನೆಯನ್ನು ವ್ಯಕ್ತಪಡಿಸಿತು. ವಚನಕಾರ್ತಿಯರ ಧೋರಣಾತ್ಮಕ ಮತ್ತು ಪ್ರಗತಿಗಾಮಿ ನಿಲುವು ವಚನ ಚಳುವಳಿಯ ಪ್ರಯುಕ್ತ ಪ್ರತಿಗಾಮಿ ಶಕ್ತಿಗಳ ವಿರುದ್ಧ ನಿಲ್ಲುವಂತಾಯಿತು.

ಈ ವಚನಕಾರ್ತಿಯರಲ್ಲಿ ಎದ್ದುಕಾಣುವ ಗುಣಾತ್ಮಕ ಅಂಶವೆಂದರೇ ವ್ಯಕ್ತಿ ಮತ್ತು ವೃತ್ತಿ ಗೌರವ. ಇಂತಹ ಹಿನ್ನೆಲೆಯುಳ್ಳ ಅನೇಕ ಅಲಕ್ಷಿತ ವಚನಕಾರ್ತಿಯರು ನಮ್ಮ ಅಧ್ಯಯನಕ್ಕೆ ಕುತೂಹಲಕರ ಆಕರಗಳಾಗುತ್ತಾರೆ. ಪ್ರಾತಿನಿಧಿಕವಾಗಿ ಹೇಳುವುದಾದರೆ ಆಯ್ದಕ್ಕಿ ಲಕ್ಕಮ್ಮ, ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ, ಗೊಗ್ಗವ್ವೆ, ಹಡಪದ ಅಪ್ಪಣ್ಣಗಳ ಪುಣ್ಯ ಸ್ತ್ರೀ ಲಿಂಗವ್ವ, ಸತ್ಯಕ್ಕ, ಹಾದರ ಕಾಯಕದ ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮ, ಸೂಳೆ ಸಂಕವ್ವೆ ಮುಂತಾದವರಿರುವರು.

ಈ ಅಲಕ್ಷಿತ ವಚನಕಾರ್ತಿಯರು ಬದುಕಿನ ಮತ್ತು ಸಮಾಜದ ಹಲವಾರು ವಿಷಮತೆಗಳ ಕುರಿತು ತಾತ್ವಿಕವಾದ ಚಿಂತನೆಯನ್ನು ಮಾಡಿದ್ದಾರೆ. ಅದು ಜ್ಞಾನ, ಭಕ್ತಿ ಲಿಂಗದಂತಹ ಪಾರಮಾರ್ಥಿಕ ವಿಷಯಗಳ ಕುರಿತದ್ದೂ ಆಗಿರಬಹುದು ಅಲ್ಲದೇ ಅರ್ಥಿಕ ಅಸಮಾನತೆ, ಲಿಂಗಭೇದ, ಜಾತಿ, ವರ್ಗಗಳಂತಹ ಸಾಮಾಜಿಕ ಅನಿಷ್ಟಗಳ ವಿಷಯಗಳೂ ಆಗಿರಬಹುದು. ಸ್ತ್ರೀ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ಅಥವಾ ಪುರುಷಾಧಿಕಾರದಿಂದ ವಿಮೋಚನೆ ಬಯಸುವಂತಹ ವಿಷಯಗಳು ಆಗಿರಬಹುದು. ಹೀಗೆ ಈ ವಚನಕಾರ್ತಿಯರು ಹಲವಾರು ವಿಷಯಗಳನ್ನು ಕುರಿತು ಅರ್ಥಪೂರ್ಣವಾಗಿ ಮತ್ತು ನಿಷ್ಠುರವಾಗಿ ತಮ್ಮ ವಚನಗಳ ಮೂಲಕ ಮಾತನಾಡಿದ್ದಾರೆ ಕನಿಷ್ಟದಲ್ಲಿ ಹುಟ್ಟಿ ಉತ್ತಮದಲ್ಲಿ ಬೆಳೆದ ಈ ಶಿವಶರಣೆಯರು ಅಭ್ಯಾಸಕ್ಕೆ ಗಂಭೀರವಾದ ಸಾಮಗ್ರಿಗಳಾಗಿದ್ದಾರೆ.

## ಅಧ್ಯಯನದ ವ್ಯಾಪ್ತಿ

ಬಹುಮುಖ್ಯವಾಗಿ ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ ಕೆಳವರ್ಗದ ವಚನಕಾರ್ತಿಯರಿಗೆ ಮಾತ್ರ ನನ್ನ ಅಧ್ಯಯನ ಸಿಮೀತವಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಉಳಿದ ವಚನಕಾರರ ಮತ್ತು ವಚನಕಾರ್ತಿಯರ ವಚನಗಳನ್ನು ಬಳಿಸಿಕೊಳ್ಳುತ್ತೇನೆ. ಆದರೆ ಪ್ರಧಾನವಾಗಿ ನನ್ನ ಆಯ್ಕೆ ಮತ್ತು ವಿಶ್ಲೇಷಣೆ ಅಲಕ್ಷಿತ ಸಮುದಾಯದಿಂದ ಬಂದ ಸ್ತ್ರೀ ವಚನಕಾರರಿಗೆ ಸೀಮಿತವಾಗಿದೆ. ಈ ವಚನಕಾರ್ತಿಯರನ್ನು ಅವರ ಸಾಮಾಜಿಕ ಸ್ಥಿತಿಗತಿಗಳ ಮೂಲಕ ಹಾಗೂ ವಚನಗಳ ಆಶಯಗಳ ಮೂಲಕ ವಿಶ್ಲೇಷಿಸಿಕೊಳ್ಳಲು ಇಲ್ಲಿ ಪ್ರಯತ್ನಿಸಿದ್ದೇನೆ. ವಚನಕಾರ್ತಿಯರಲ್ಲಿ ಪುರುಷಾಧಿಕಾರದ ನೆಲೆಗಳನ್ನು ವಿರೋಧಿಸಿ ವಿರಕ್ತಿಯ ನೆಲೆಯಲ್ಲಿ ಬದುಕುವ ಅಕ್ಕಮಹಾದೇವಿ ಒಂದು ಕಡೆಯಾದರೆ ತಮ್ಮ ಕೌಟುಂಬಿಕ ಬದುಕನ್ನು ಒಪ್ಪಿಕೊಂಡು ಆಧ್ಯಾತ್ಮಿಕ ಉನ್ನತಿಯತ್ತ ಸಾಗುವ ಆಯ್ದಕ್ಕಿ ಲಕ್ಕಮ್ಮ, ರೆಮ್ಮವ್ವೆ, ಮೋಳಿಗೆ ಮಹದೇವಿ, ಬಾಚಿಕಾಯಕದ ಕಾಳವ್ವೆ, ಮುಂತಾದವರು ಇನ್ನೊಂದಡೆ, ಮತ್ತೊಂದೆಡೆ ಕೌಟುಂಬಿಕ ನೆಲೆಯಿಂದ ಹೊರಗುಳಿದು ಆಧ್ಮಾತ್ಮಿಕ ಅನುಭವಕ್ಕೆ ಹಾತೊರೆಯುವ ಸೂಳೆ ಸಂಕವ್ವೆ ಹಾದರ ಕಾಯಕದ ಗಂಗಮ್ಮ ಕೌಟುಂಬಿಕ ಚೌಕಟ್ಟಿನ ಹೊರಗುಳಿದ ಸ್ತ್ರೀ ವ್ಯಕ್ತಿತ್ವಗಳು ಕಾಣಸಿಗುತ್ತವೆ. ವಿವಾಹ ವಿವಾಹೇತರ ಸಂಬಂಧಗಳ ಮೂಲಕ ಆಧ್ಯಾತ್ಮಿಕ ಪರಿಧಿಯಲ್ಲಿ ಸುತ್ತುವ ಈ ಸಂಗತಿಗಳು ಅಧ್ಯಯನಕ್ಕೆ ಸವಾಲಾಗುವಂತಿವೆ.

ಈ ಸ್ತ್ರೀ ಸಂವೇದನೆಗಳು ಎಷ್ಟೇ ಪ್ರಖರವಾಗಿ ಪುರುಷಾಧಿಕಾರದ ನೆಲೆಗಳನ್ನು ಕಿಳೀಕರಣದ ಪ್ರವೃತ್ತಿಗಳನ್ನು ವಿರೋಧಿಸಿದರೂ ಸ್ವಂತ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವಲ್ಲಿ ಸೋಲುತ್ತವೆ. ಇಂಥಲ್ಲಿ ಮತ್ತೆ ಪಾರಂಪರಿಕ ಬದುಕಿನ ಕ್ರಮಗಳಿಗೆ ತೀರ ಹತ್ತಿರವಾಗುವ ಹಾಗೂ ಒಪ್ಪಿಕೊಳ್ಳುವ ನೆಲೆಗಳನ್ನು ಕಾಣುತ್ತೇವೆ. ಈ ಅಲಕ್ಷಿತ ವಚನಕಾರ್ತಿಯರು ತಮ್ಮನ್ನು ಪುರುಷ ಮತ್ತು ಪುರುಷ ದೈವಗಳ ಮೂಲಕ ಗುರುತಿಸಿಕೊಳ್ಳುತ್ತವೆ. ಉದಾ : ನಿರ್ಲಜ್ಜೇಶ್ವರಾ, ಗುಮ್ಮೇಶ್ವರಾ, ಶಂಭು ಜಕ್ಕೇಶ್ವರಾ, ಇತ್ಯಾದಿ ದೈವವನ್ನು ವ್ಯಕ್ತಿಕರಿಸಿ ತನ್ನ ಅಸ್ತಿತ್ವವನ್ನು ಕಟ್ಟಿಕೊಳ್ಳುವ ಈ ಸಂಗತಿಗಳು ನನ್ನ ಅಧ್ಯಯನದ ಬಹುಮುಖ್ಯ ಚರ್ಚೆಯ ವಿಷಯಗಳಾಗಿವೆ.

ಈ ಚರ್ಚೆಗಳನ್ನು ಬಹುಮುಖ್ಯವಾಗಿ ಇದುವರೆಗೂ ವಚನಸಾಹಿತ್ಯದ ಮೇಲೆ ಬಂದ ವಿಮರ್ಶೆಗಳು, ಚರ್ಚೆಗಳು ಹಾಗೂ ಸಂಗ್ರಹಗಳಿಂದ ನಡೆಸಲು ಪ್ರಯತ್ನಿಸಲಾಗುತ್ತದೆ. ಅಲ್ಲದೆ ಇಂದು ವ್ಯಾಪಾಕವಾಗಿ ಅಧ್ಯಯನಕ್ಕೊಳಪಡುತ್ತಿರುವ ಮಹಿಳಾ ಸಂವೇದನೆಗಳ ಹಿನ್ನೆಲೆಯಲ್ಲಿ ಇಲ್ಲಿ ಚರ್ಚೆಯನ್ನು

ಬೆಳೆಸಲಾಗುತ್ತದೆ. ಮಹಿಳಾ ಅಧ್ಯಯನಕಾರ್ತಿಯಾಗಿ ವರ್ತಮಾನದಲ್ಲಿ ಇಂಥ ಹೊಸ ಆಲೋಚನೆಗಳೊಂದಿಗೆ ಅಲಕ್ಷಿತ ವಚನಕಾರ್ತಿಯರೊಂದಿಗೆ ಮುಖಾಮುಖಿಯಾಗುವ ಮೂಲಕ ನನ್ನ ಅಧ್ಯಯನಕ್ಕೆ ಹೊಸ ಪರಿಪ್ರೇಕ್ಷೆಯೊಂದನ್ನು ಕಟ್ಟಿಕೊಳ್ಳುವ ಹಂಬಲ ನನ್ನದಾಗಿದೆ.

ಪ್ರಸ್ತುತ ಅಧ್ಯಯನವನ್ನು ಅಭ್ಯಾಸದ ಅನುಕೂಲಕ್ಕಾಗಿ ಈ ಕೆಳಗಿನಂತೆ ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡಿದ್ದೇನೆ.

## ಅಧ್ಯಾಯದ ವಿಂಗಡಣೆ

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಪರಿಮಿತಿಗಳನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಒಟ್ಟು ವಚನ ಚಳುವಳಿಯನ್ನು ಗಮನದಲ್ಲಿಟ್ಟುಕೊಂಡು ಅಲಕ್ಷಿತ ವಚನಕಾರರ ಹಾಗೂ ವಚನಕಾರ್ತಿಯರ ಆಶಯ ಅಭಿವ್ಯಕ್ತಿಗಳನ್ನು ಕುರಿತು ಸಮೀಕ್ಷಾತ್ಮಕವಾಗಿ ಚರ್ಚಿಸಲಾಗಿದೆ. ಇದರಿಂದ ಮೇಲ್ವರ್ಗದ ವಚನಕಾರರು ಹಾಗೂ ಕೆಳವರ್ಗದ ವಚನಕಾರರಿಗೂ ಇರುವ ಭಿನ್ನತೆಗಳನ್ನು ಗುರುತಿಸಿಕೊಳ್ಳಲು ಸಾಧ್ಯವಾಗಿದೆ.

ಮೂರನೇ ಅಧ್ಯಾಯದಲ್ಲಿ ಅಲಕ್ಷಿತ ವಚನಕಾರ್ತಿಯರ ಒಲವು ನಿಲುವುಗಳನ್ನು ಅವರ ಜ್ಞಾನ-ಭಕ್ತಿ, ಶರಣಸತಿ-ಲಿಂಗಪತಿ, ಆಧ್ಯಾತ್ಮಿಕ ಸಂಘರ್ಷಗಳು, ಭವಿ ಮತ್ತು ಭಕ್ತ ಸಂಬಂಧಗಳು, ಲಿಂಗಭೇದಗಳಂತಹ ಹಲವಾರು ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ತಾತ್ವಿಕವಾಗಿ ಚರ್ಚಿಸಲಾಗಿದೆ. ಬಹುಮುಖ್ಯವಾಗಿ ವಚನ ಪರಿಸರದ ಅನುಭಾವಿಕ ನೆಲೆಯಲ್ಲಿ ಮಹಿಳೆಯರು ತಮ್ಮನ್ನು ಗುರುತಿಸಿಕೊಂಡ ನೆಲೆಗಳನ್ನು ಶೋಧಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಅಲಕ್ಷಿತ ವಚನಕಾರ್ತಿಯರ ಧೋರಣಾತ್ಮಕ ಮತ್ತು ಪ್ರಗತಿಗಾಮಿ ನಿಲುವುಗಳನ್ನು ವಿವಿಧ ಹಂತಗಳಲ್ಲಿ ನಿರ್ವಂಚಿಸಿಕೊಳ್ಳಲಾಗಿದೆ. ಬಹುಮುಖ್ಯವಾಗಿ ಆರ್ಥಿಕ ಸಾಮಾಜಿಕ ಅಸಮಾನತೆ, ವ್ಯಕ್ತಿ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯ, ವ್ಯಕ್ತಿ ಮತ್ತು ವೃತ್ತಿ ಗೌರವದ ಹಿನ್ನೆಲೆಯಲ್ಲಿ ವಚನಕಾರ್ತಿಯರ ಕ್ರಾಂತಿಕಾರಕ ಆಶಯಗಳನ್ನು ಕಂಡುಕೊಳ್ಳಲಾಗಿದೆ. ಆ ಮೂಲಕ ಕೆಳಸಂಸ್ಕೃತಿಗಳ ಚಲನಶೀಲ ಮತ್ತು ಶ್ರದ್ಧಾತ್ಮಕ ಬದುಕಿನ ಅನನ್ಯತೆಗಳನ್ನು ಗುರುತಿಸಿಕೊಳ್ಳಲಾಗಿದೆ.

ಅಧ್ಯಾಯ ಐದರಲ್ಲಿ ಸ್ತ್ರೀ ವ್ಯಕ್ತಿತ್ವಕ್ಕೆ ಒದಗಿದ ಕಂಠಕಗಳನ್ನು ಪುರುಷ ಸಮಾಜ ನಿರ್ಮಿತಿಗೊಳಿಸಿದ ಅಸಮಾನತೆಯ ಕ್ರೌರ್ಯಗಳನ್ನು ದಿಟ್ಟವಾಗಿ ಎದುರಿಸಿದ ಬಗೆಗಳನ್ನು ವಿವೇಚಿಸಲಾಗಿದೆ. ಅದು ಯಜಮಾನ ಸಂಸ್ಕೃತಿಯ ವಿರುದ್ಧದ ನೆಲೆಯಾಗಿರಬಹುದು, ಅಥವಾ ಕೌಟುಂಬಿಕ ಪುರುಷಾಧಿಕಾರದ ವಿರುದ್ಧದ ನೆಲೆಯಾಗಿರಬಹುದು. ಇನ್ನೂ ಮುಂದುವರಿದು ಹೇಳುವುದಾದರೆ ವ್ಯಕ್ತಿ ಮತ್ತು ಆಂತರಿಕ ದ್ವಂದ್ವಗಳ ವಿರುದ್ಧವೆ ವಚನಕಾರ್ತಿಯರು ಸಾರಿದ ಸಮರವನ್ನು ಸ್ತ್ರೀ ಸಂವೇದನೆ ಹಿನ್ನೆಲೆಯಲ್ಲಿ ಗುರುತಿಸಿಕೊಳ್ಳಲು ಪ್ರಯತ್ನಿಸಿದ್ದೇನೆ. ಇದರಿಂದ ಏಕಕಾಲಕ್ಕೆ ತನ್ನ ಸುತ್ತಲಿನ ಸಾಮಾಜಿಕ ಕ್ರೌರ್ಯಗಳನ್ನು ಹಾಗೂ ತಮ್ಮ ವ್ಯಕ್ತಿತ್ವದ ಒಳಗಡೆಯೆ ಇರುವ ಛಿದ್ರಕ ಪ್ರವೃತ್ತಿಗಳೊಂದಿಗೆ ಹೋರಾಟ ಮಾಡಿದ ಸಂಗತಿಗಳನ್ನು ಅರಿತುಕೊಳ್ಳಲಾಗಿದೆ. ಬಹಿರಂಗ ವಾಸ್ತವದ ಜೊತೆ ಅಂತರಂಗ ವಾಸ್ತವವನ್ನು ಹಸನುಗೊಳಿಸುವ ಮತ್ತು ಅದನ್ನು ರಚನಾತ್ಮಕವಾಗಿ ದುಡಿಸಿಕೊಂಡ ಗುಣಾತ್ಮಕ ನೆಲೆಗಳನ್ನು ಕಂಡುಕೊಳ್ಳಲಾಗಿದೆ.

ಅಧ್ಯಾಯ ಆರರಲ್ಲಿ ಒಟ್ಟು ಅಧ್ಯಯನದ ಫಲಿತಗಳನ್ನು ಅದರ ಇತಿಮಿತಿಗಳೊಂದಿಗೆ ದಾಖಲಿಸಲಾಗಿದೆ.

ಮನುಷ್ಯನ ವ್ಯಕ್ತಿತ್ವ ಹಾಗೂ ಬದುಕಿನ ಹೊಸ ಬೆಳವಣಿಗೆಯನ್ನು ಕುರಿತಂತೆ ಚಿಂತನೆ ಮಾಡಿದ ಏಕೈಕ ಅಭಿವ್ಯಕ್ತಿಗಳು ಎಂದರೆ ಈ ವಚನಗಳೇ ಆಗಿವೆ. ವಚನಕಾರರು ಜೀವನವನ್ನು ಪೂರ್ಣ ದೃಷ್ಟಿಯಿಂದ ನೋಡಿದುದರ ಪರಿಣಾಮವಾಗಿ ಜನ ಜೀವನದ ಸಮಗ್ರ ಕ್ರಾಂತಿಗೆ ಕಾರಣವಾಯಿತು. ಹನ್ನೆರಡನೆಯ ಶತಮಾನದಲ್ಲಿ ಹಿಂದೆ ಕರ್ನಾಟಕದ ಚರಿತ್ರೆಯಲ್ಲಿ ಮಾತ್ರವಲ್ಲದೆ ಇಡೀ ಜಾಗತಿಕ ಪರಿಸರದಲ್ಲಿ ಕಾಣದ ವ್ಯಕ್ತಿಯ ಬಗೆಗಿನ ಕಾಳಜಿಗಳು ಪ್ರಥಮ ಬಾರಿಗೆ ವ್ಯಕ್ತಗೊಂಡ ಅಮಾನವೀಯ ಕ್ರೌರ್ಯದ ನೆಲೆಗಳನ್ನು ವಚನಕಾರರು ಪ್ರತಿಭಟಿಸಿದ್ದಾರೆ. ಅದರಲ್ಲೂ ಅಲಕ್ಷಿತ ವಚನಕಾರರು ಈ ವಚನ ಚಳುವಳಿಯ ನೇತಾರರಾದುದು ಪ್ರಮುಖ. ಈ ಚಳುವಳಿ ವ್ಯಷ್ಟಿ-ಸಮಷ್ಟಿಗಳ, ಸಮಾಜ-ಧರ್ಮ, ಅಂತರಂಗ-ಬಹಿರಂಗ, ಇಹ-ಪರಗಳ, ನಡೆ-ನುಡಿ, ಬುದ್ಧಿ-ಭಾವ, ಆಚಾರ-ವಿಚಾರ ಹೀಗೆ ಒಟ್ಟು ಮಾನವ ಜೀವಿತದ ಎಲ್ಲ ಸಮಸ್ಯೆಗಳ ಎಲ್ಲ ಪದರುಗಳನ್ನು ವಿಶ್ಲೇಷಿಸಿ ಸಾರ್ವತ್ರಿಕವಾದ ವಿಚಾರ ಸಮ್ಮಿತವಾದ ಎತ್ತರವನ್ನು ಕಂಡುಕೊಳ್ಳಲು ನಡೆದ ಸಾಮೂಹಿಕ ಪ್ರತಿರೋಧವೆ ಇದು.

ಶ್ರೇಣೀಕೃತ ವ್ಯವಸ್ಥೆಯು ರೂಪಿಸಿದ ಎಲ್ಲ ಸಾಮೂಹಿಕ, ಧಾರ್ಮಿಕ ನೆಲೆಗಳನ್ನು ವಿರೋಧಿಸಿ ಸಾಮಾಜಿಕ ಚಲನೆಯನ್ನು ಸಾಧ್ಯವಾಗಿಸಿದ್ದು ಈ ವಚನ ಚಳುವಳಿ. ಜಾತಿ, ಅಂತಸ್ತು, ಲಿಂಗ, ವರ್ಣ,

ಉದ್ಯೋಗ ಇವುಗಳನ್ನು ಗಣನೆಗೆ ತೆಗೆದುಕೊಳ್ಳದೆ ವ್ಯಕ್ತಿಯ ಧಾರ್ಮಿಕ ಉನ್ನತಿಯನ್ನು ತನ್ನ ಮುಖ್ಯ ಆಶಯವನ್ನಾಗಿ ಮಾಡಿಕೊಂಡು ಹಿಂದೂ ವ್ಯವಸ್ಥೆಯ ರಚನಾ ಸ್ವರೂಪವನ್ನೇ ಪ್ರಶ್ನಿಸಿ, ಯೋಗ್ಯತೆ ಯೊಂದನ್ನೇ ಒರೆಗಲ್ಲಾಗಿಟ್ಟುಕೊಂಡು ಸಾಮಾಜಿಕ ಸಮಾನತೆ ತರಲು ಈ ಚಳುವಳಿ ಪ್ರಯತ್ನಿಸಿತು. ಈ ಜನಾಂಗಿಕವಾದ ಜನಪರ ಮೌಲ್ಯಗಳು ಇಂದಿನ ವಾಸ್ತವಕ್ಕೆ ಅತಿ ಜರೂರ ಆಗಿವೆ.

ಈ ವಚನ ಚಳುವಳಿಯು ಸಾಮಾಜಿಕ ಚಿಂತನೆಯ ಅನೇಕ ಧಾರೆಗಳನ್ನು ಕಟ್ಟಿಕೊಟ್ಟಿತು. ಇದು ಮತೀಯ ನೆಲೆಗಟ್ಟಿನ ಮೇಲೆ ನಿಂತು ಕೊಂಡಿದ್ದ ಅರ್ಥರಹಿತ ಆಚರಣೆ, ಪುರೋಹಿತಶಾಹಿ ಆಡಳಿತ, ವೈದಿಕ ಧರ್ಮದ ಯಜ್ಞಯಾಗಗಳನ್ನು ಧಿಕ್ಕರಿಸಿ ಬೆಳೆಯಿತು. ಇದೊಂದು ಧಾರ್ಮಿಕ ಕ್ರಾಂತಿಯಂತೆ ಕಂಡು ಬಂದರೂ ಅನೇಕ ಮೌಲ್ಯಾಧಾರಿತ ತತ್ವಗಳಾದ ವ್ಯಕ್ತಿ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯ, ಆರ್ಥಿಕ ಸಮಾನತೆ, ವರ್ಗ, ವರ್ಣ ರಹಿತ ತತ್ವಗಳನ್ನು ಎತ್ತಿಹಿಡಿಯಿತು. ಆದರೂ ಈ ಚಳುವಳಿಯ ಅಂತರಂಗಕ್ಕೆ ಪ್ರವೇಶಿಸಿದಾಗ ಅನೇಕ ವೈರುಧ್ಯಾತ್ಮಕ ವಿಚಾರ ಧಾರೆಗಳು ನಮಗೆ ಎದುರಾಗುತ್ತವೆ.

ಈ ಚಳುವಳಿಯು ಕೆಳವರ್ಗದವರ ಉದ್ಧಾರಕ್ಕಾಗಿ ಕೆಳವರ್ಗದವರೇ ಕೈಗೊಂಡ ಒಂದು ಜಾಗೃತಿ ಸಮರೋದ್ಯೋಗ. ಇದರ ಮುಂಚೂಣಿಯಲ್ಲಿದ್ದವರು ಕೂಡಾ ಕೆಳವರ್ಗದವರೆ, ಕೆಳಪಾತಳೀಯಿಂದಲೇ ಭುಗಿಲೆದ್ದ ವಚನಕಾರರ ಆಂದೋಲನ ಭಿನ್ನತೆಯಿಲ್ಲದೆ ಒಂದೇ ನೆಲೆಯಲ್ಲಿ ಸಿಡಿಯಿತೆಂಬುದಂತು ನಿಜವೇ. ಆದರೂ ಮೇಲ್ವರ್ಗದವರನ್ನು ವಿರೋಧಿಸಲಾಗದ ಅಸಹಾಯಕತೆಯಲ್ಲಿದ್ದರೂ ಅವರ ಬಗೆಗೆ ಸದಾ ಅಸಹನೆ ಧ್ವನಿ ಹೊಂದಿರುವದು ಸ್ಪಷ್ಟ. ಕೆಳವರ್ಗದವರೇ ಹೆಚ್ಚಾಗಿ ಈ ಚಳುವಳಿಯಲ್ಲಿ ದುಮುಕಿದ್ದರಿಂದ ಇದು ಒಂದು ದೊಡ್ಡ ಶಕ್ತಿಯಾಗಿ ಬೆಳೆಯಿತು. ಬಸವಣ್ಣ, ಸಿದ್ಧರಾಮ, ಅಲ್ಲಮ ಪ್ರಭು, ಅಕ್ಕಮಹಾದೇವಿ, ಚನ್ನಬಸವಣ್ಣ ಈ ಕೆಲ ವಚನಕಾರರನ್ನು ಹೊರತು ಪಡಿಸಿದರೆ ಉಳಿದವರೆಲ್ಲರು ದುಡಿಯುವ ವರ್ಗದಿಂದ ಬಂದವರೆ. ಅಂದರೆ ಅಂಬಿಗರ ಚೌಡಯ್ಯ, ನೂಲಿಯ ಚಂದಯ್ಯ, ಮಡಿವಾಳ ಮಾಚಿದೇವ, ತುರುಗಾಹಿ ರಾಮಣ್ಣ, ಡಕ್ಕೆಯ ಬೊಮ್ಮಣ್ಣ, ಮಾದಾರ ಚೆನ್ನಯ್ಯ, ಬಾಚಿಕಾಯಕದ ಬಸವಯ್ಯ, ಹಾವಿನಾಳ ಕಲ್ಲಯ್ಯ, ಕಾಮಾಟದ ಭೀಮಣ್ಣ ಅಯ್ದಕ್ಕಿ ಮಾರಯ್ಯ, ಸೂಳೆ ಸಂಕವ್ವೆ, ಕೊಟ್ಟಣದ ಸೋಮವ್ವೆ, ಕದಿರೆ ರೆಮ್ಮವ್ವೆ, ಹಾದರ ಕಾಯಕದ ಗಂಗಮ್ಮ ಹೀಗೆ ತಮ್ಮ ವೃತ್ತಿ ನೆಲೆಯಿಂದಲೇ ತಮ್ಮನ್ನು ಗುರುತಿಸಿಕೊಂಡು ವ್ಯವಸ್ಥೆಯ ವಿಷಮತೆಯ ವಿರುದ್ಧ ಪ್ರತಿಕ್ರಿಯಿಸಿದ್ದು ಗಮನಾರ್ಹ.

ಕೆಳಸ್ತರದ ವಚನಕಾರರೆಲ್ಲರು ಕಾಯಕ ಜೀವಿಗಳೇ ಆಗಿದ್ದ ಕಾರಣ 'ಕಾಯಕ ನಿಂದಿತ್ತು ಎನ್ನಾಳ್ದನ ಹೋಗಯ್ಯ' ಕಾಯಕದಲ್ಲಿ ನಿರತನಾದರೆ ಗುರುದರುಶನವಾದರೂ ಮರೆಯಬೇಕು. 'ಗುರುಲಿಂಗ

ಜಂಗಮರಿಗೂ ಕಾಯಕದಿಂದಲೇ ಜೀವನ್ಮುಕ್ತಿ' ಎನ್ನುವಲ್ಲಿ ಅವರು ಕಾಯಕಕ್ಕೆ ಕೊಟ್ಟ ಮಹತ್ವ ಎದ್ದು ತೋರುವುದು. ಕಾರಣ "ಅಂದಿನ ಕಾಲಾವಧಿಯ ಶಾಸನಗಳನ್ನು ಗಮನಿಸಿದರೆ ಅಕ್ಕಸಾಲೆ, ನಾಯಿಂದ, ಅಂಬಿಗ, ಅಗಸ, ಕಮ್ಮಾರ, ಕುಂಬಾರ, ಮೊದಲಾದವರೂ ತೆರಿಗೆಗಳನ್ನು ಕೊಡಬೇಕಾಗಿತ್ತು. ಇವರಲ್ಲದೆ ಗಾಣದ ತೆರೆ, ನೂಲು ತೆರೆ, ಮಗ್ಗತೆರೆ, ಬಣ್ಣತೆರೆ, ಕುಲುಮೆ ತೆರೆ ಹೀಗೆ ಎಲ್ಲಾ ವೃತ್ತಿಯವರು ತೆರಿಗೆಯನ್ನು ಕೊಡಬೇಕಾಗುತ್ತಿತ್ತು. ಉಪ್ಪು ಮಾಡುವವರ ಮೇಲೂ ಸುಂಕವಿದ್ದಿತು. ಎತ್ತು, ಎಮ್ಮೆ, ಹಸು, ಕತ್ತೆ, ಆಡು, ಗಾಡಿ ಕೊನೆಗೆ ತಿಪ್ಪೆಯ ಮೇಲೂ ಸುಂಕ ಕೊಡಬೇಕಾಗುತ್ತಿತ್ತೆನ್ನು ವುದನ್ನು ಶಾಸನಗಳು ಹೇಳುತ್ತವೆ. ಬಹುಶಃ ಇಷ್ಟೆಲ್ಲಾ ತೆರಿಗೆಗಳು ಸಾಮಾನ್ಯ ಜನರಿಗೆ ಹೊರಲಾರದ ಹೊರೆಗಳಾಗಿದ್ದಿರಬೇಕು. ಹಾಗೆ ಶ್ರಮ ಜೀವಿಗಳಿಂದ ಸಂಘಟಿತವಾದದ್ದರ ಫಲವೇ ಈ ವಚನ ಚಳುವಳಿ. ಹೀಗಾಗಿ ಕಾಯಕವೇ ಅವರ ಪ್ರಾಣವಾದದ್ದು ಸಹಜವೇ ಇದೆ.

ಅಂಬಿಗರ ಚೌಡಯ್ಯನಂತ ವಚನಕಾರರಂತೂ ತನ್ನ ವೃತ್ತಿಯಿಂದಲೇ ತನ್ನನ್ನು ಗುರುತಿಸಿಕೊಂಡಿದ್ದಲ್ಲದೆ ತನ್ನ ವಚನಾಂಕಿತವನ್ನೇ 'ಅಂಬಿಗ' ಎಂಬ ವಿಶೇಣದಿಂದ ಕರೆದುಕೊಂಡಿದ್ದನ್ನು ಕಂಡಾಗ ಇನ್ನುಳಿದ ವಚನಕಾರರಗಿಂತಲೂ ಮಿಗಿಲಾದ ವಿಶೇಷತೆ ಇವನಲ್ಲಿ ಎದ್ದು ತೋರುವುದು. ಇನ್ನುಳಿದ ವಚನಕಾರರೆಲ್ಲರು ತಮ್ಮ ತಮ್ಮ ಇಷ್ಟ ದೈವಗಳ ಹೆಸರುಗಳನ್ನೇ ತಮ್ಮ ವಚನಾಂಕಿತವನ್ನಾಗಿ ಮಾಡಿಕೊಂಡಿದ್ದಾರೆ. ಆದರೆ ಈತ ತನ್ನ ವೃತ್ತಿ ನೆಲೆಯಿಂದಲೇ ಗುರುತಿಸಿಕೊಂಡಿರುವುದನ್ನು ಕಂಡಾಗ ಅವನಲ್ಲಿರುವ ಕಾಯಕದ ಮಹತ್ವ ದೈವತ್ವಕ್ಕಿಂತ ಕಾಯಕ ಮೊದಲು. ಕಾಯಕದಲ್ಲಿಯೇ ದೇವರನ್ನು ಕಂಡುಕೊಳ್ಳುವ ವೈಖರಿ ಮೆಚ್ಚುವಂತಹದ್ದಾಗಿದೆ.

ಮೇಲ್ವರ್ಗದ ವಚನಕಾರರಿಗಿಂತಲೂ ವಿಭಿನ್ನ ನೆಲೆ, ಚಿಂತನೆ, ಸಾಧನೆಗಳನ್ನು ಹೊಂದಿದ್ದ ಕೆಳವರ್ಗದ ವಚನಕಾರರು ಇಡೀ ವಚನ ಚಳುವಳಿಗೆ ಪ್ರೇರಕ ಶಕ್ತಿಗಳಾಗಿದ್ದು, ತಾವು ಶರಣ ಪಂಥಕ್ಕೆ ಸೇರಿದ ಮೇಲೂ ಮೇಲ್ವರ್ಗದವರ ಅನುಕಂಪಕ್ಕೆ ಪಕ್ಕಾಗದೆ ಆತ್ಮಾಭಿಮಾನ, ಆತ್ಮಸ್ಥೈರ್ಯ ಹೊಂದಿ ಶರಣಧರ್ಮದ ಕ್ರಿಯಾಕಾಂಡವನ್ನು ಕಟುವಾಗಿ ವಿಮರ್ಶೆಗೆ ಒಳಪಡಿಸಿದ್ದಲ್ಲದೆ ಎಷ್ಟೋ ಸಲ ಲಿಂಗ ಹಾಗೂ ಲಿಂಗಾಧಾರಣೆಯಂತ ಧಾರ್ಮಿಕ ಸಂಕೇತದ ಆಚರಣೆಯನ್ನು ನಿರ್ಭೀತಿಯಿಂದ ಪ್ರಶ್ನಿಸಿದುಂಟು. ವಚನಕಾರರಿಗೆ "ವೈದಿಕರಿಗೆ ಪವಿತ್ರರಾಗಿರುವ ಋಷಿಗಳೆಲ್ಲ ಹೇಗೆ 'ಕೀಳು' ವೃತ್ತಿಯಲ್ಲಿದ್ದವರು ಎಂದು ತೋರಿಸಿಕೊಡುವ ಮೂಲಕ ಒಂದು ವರ್ಗದ ಕುಲಮದವನ್ನು ಮುರಿಯ ಬೇಕಿತ್ತು, ಜತೆಯಲ್ಲಿಯೇ ಸಾಮಾಜಿಕವಾಗಿ 'ಕೀಳು' ಎನಿಸಿಕೊಂಡ ವೃತ್ತಿ ಜಾತಿಗಳಿಂದ ಬಂದಿರುವ ತಮ್ಮ ದಲಿತ 'ಭಕ್ತರ'

ಕೀಳರಿಮೆಯನ್ನು ಕಳೆದು ಸ್ವಾಭಿಮಾನ ಬೆಳೆಸಬೇಕಿತ್ತು. ತಮ್ಮ ಶ್ರೇಷ್ಠತೆಯನ್ನು ಸಾರಿಕೊಳ್ಳುವ ಹಾರುವರ ಪುರಾಣಗಳನ್ನು ಅಜ್ಞಾನದ ಸಂಕೇತವೆಂದು, ಕೊಟ್ಟಣಕ್ಕೆ ಹಾಕಿ ಕುಟ್ಟಿದರೆ ನುಚ್ಚು ತೌಡು ಸಿಗುವ ಜೊಳ್ಳು ಕಾಳೆಂದು ರುಜುವಾತು ಪಡಿಸಬೇಕಿತ್ತು. ಕೆಳಜಾತಿ ವೃತ್ತಿಗಳ ನೆಲೆಯಿಂದ ಬಂದ ಭಕ್ತರಿಗೆ ಈ ವಿಧಾನವು ಜಾತಿ ನಿಯಮಗಳನ್ನು ನಿರಾಕರಿಸುವ ದಿಟ್ಟತನವನ್ನು ಹಾಗೂ ತಾವು ಕೀಳಲ್ಲ ಎಂಬ ಪ್ರಜ್ಞೆಯನ್ನು ಮಿಂಚಿನ ವೇಗದಲ್ಲಿ ಕಲಿಸಿಬಿಟ್ಟಿತು.''[೪]

'ಲಿಂಗವೆಂಬುದು ಕಾಯಕದ ತೊಡಕು' ಎನ್ನುವಲ್ಲಿ ಅಂಬಿಗರ ಚೌಡಯ್ಯನ ಲಿಂಗಾತಿಶಯವನ್ನು ನಿರ್ಭೀತಿಯಿಂದ ಭಂಗಿಸಿದ್ದಾನೆ. 'ಶಾಲೆಯೊಳಗಾಡುವ ಸೆಲೆನೆಲೆಯರಿದ ಸೂತಕರಿಗೆ ಮಹಾಘನ ಹೊಲಬೇತಕ್ಕೆ' ಎಂದು ಕೆಳಸ್ತರದ ನೋವು ಉಪೇಕ್ಷೆಗೊಳಗಾದ ಮಾದಾರ ದೂಡಯ್ಯ ಮೂಲ ಪಂಥದ ಲಿಂಗಾಯತರನ್ನೇ ವಿಮರ್ಶೆಗೆಳೆದಿರುವುದು ಅವರ ವಾಕ್ ಸ್ವಾತಂತ್ರ್ಯವನ್ನು ಸೂಚಿಸುವುದು ಇಹ ಪರವೆರಡರಲ್ಲೂ ಪೌರುಷದಿಂದಲೇ ಜೀವನ ಸಿದ್ಧಿಯನ್ನು ಕಂಡುಕೊಳ್ಳಬೇಕೆಂಬ ಚೌಡಯ್ಯನಿಗೆ ಶರಣಸತಿ ಲಿಂಗಪತಿ ಎಂಬ ಶರಣ ಪಂಥದ ಮಧುರ ಮಾರ್ಗವೂ ಸಪ್ಪೆ ಎನಿಸಿರಬಹುದು. 'ಶರಣಸತಿ ಲಿಂಗಪತಿಯೆಂಬರು, ಶರಣ ಹೆಣ್ಣಾದ ಪರಿ ಎಂತು? ಲಿಂಗ ಗಂಡಾದ ಪರಿಯೆಂತು?'[೫] ಎನ್ನುವ ಪ್ರಶ್ನೆಗೆ ಆಧ್ಯಾತ್ಮಿಕವಾಗಿ ಉತ್ತರ ನೀಡಲು ಸಾಧ್ಯವಿಲ್ಲ, ಇಲ್ಲಿ ತಮ್ಮ ಕುಲಕಸುಬನ್ನೇ ಅನುಭಾವವನ್ನಾಗಿ ಮಾಡಿದರು. ಇವರಿಗೆ ಜಾತ್ಯಾತೀತ ನಿಲುವು ಮುಖ್ಯವಾಗಿತ್ತೆ ಹೊರತು ಲಿಂಗವನ್ನು ಧರಿಸಿ ಒಂದು ಜಾತಿಗೆ ಸೇರುವುದು ಅವರಿಗೆ ಬೇಕಿರಲಿಲ್ಲ.

'ವಿಷಯಕ್ಕೆ ಕುಲವಿಲ್ಲ' ಸಂಬೊಳಿ ನಾಗಿದೇವನ ಮಾತಿನಲ್ಲಿ ಲಿಂಗವನ್ನು ಧರಿಸಿ ಒಂದು ಜಾತಿಗೆ ಸೇರುವ ಮನೋಭಾವಕ್ಕಿಂತ ಜಾತಿಯ ಚೌಕಟ್ಟನ್ನು ಕಿತ್ತೆಸೆದು ಪ್ರೀತಿ, ಭಕ್ತಿಗಳಿಗೆ ಕುಲದ ಮಾತೆಲ್ಲಿಂದ ಬಂತು ಎಂಬ ಸ್ಪಷ್ಟ ನಿಲುವು ಅವನದು. 'ಆತ್ಮಂಗೆ ಯಾವ ಕುಲವುಂಟು ಕೇಳಿರೋ' ಎನ್ನುವ ಸೊಡ್ಡಳ ಚಾಮರಸ, 'ಅಚಾರಕ್ಕೆ ಬೇರೆ ಕುಲಛಲವುಂಟೆ? ಎನ್ನುವ ಮಾರಯ್ಯ 'ನಡೆ ನುಡಿ ಸಿದ್ಧಾಂತವಾದಲ್ಲಿ ಕುಲಹೊಲೆ-ಸೂತಕವಿಲ್ಲ' ಎಂಬಂಶವನ್ನು ವ್ಯಕ್ತಪಡಿಸಿರುವ ಮಾದಾರ ಚೆನ್ನಯ್ಯನ ನಿಷ್ಠೆ ವ್ಯಕ್ತಗೊಳ್ಳುವುದು.

*'ಬೇಡಂಗೆ, ಚೇಡಂಗೆ, ಡೋಹಂಗೆ, ಹೊಲೆಯಂಗೆ*
*ರೂಡಿಗೀಶ್ವರನೊಲಿದ ಪರಿಯ ನೋಡಾ*
*ಲೋಕದ ಮಾನವರು ಮಾಡುವರು ಸಮಯಂಗಳಂ*
*ಮಾಡಲಿಕ್ಕೆ ·ಅವರೇನು ಸ್ವತಂತ್ರರೇ?*
*ಇವರೊಡ್ಡಿದ ತಾವಿನಲ್ಲಿ ಕಲ್ಲು ಮುಳ್ಳು ಮೂಡುವವೆಂದಾತ ಅಂಬಿಗರ ಚೌಡಯ್ಯ*[೬]

ಇಲ್ಲಿ ಚೌಡಯ್ಯನು ಮೌಲ್ಯಗಳನ್ನು ತಿರುವು ಮುರುವು ಮಾಡಿಕೊಂಡು ನೋಡುವ ವಿಧಾನ ಮಾಡಿದ್ದಾನೆ. ಜಾತಿಯನ್ನೇ ನೈತಿಕ ಮಾನದಂಡವಾಗಿ ಬಳಸುವ ನವೀನ ಮಾರ್ಗವನ್ನು ಅನುಸರಿಸಿದರು ಕೆಳಸ್ತರದ ಜನರನ್ನು ಕ್ರೂರರೀತಿಯಲ್ಲಿ ಕಾಣುವ ವ್ಯವಸ್ಥೆ ತೀವ್ರತರವಾಗಿದ್ದು ಅಂತಹ ವ್ಯವಸ್ಥೆಗೆ ಚಲನೆಯನ್ನು ತಂದುಕೊಟ್ಟಿದ್ದು ಈ ಚಳುವಳಿ ನಿಜವೇ ಅದರೂ ಅಂದೋಲನದ ಕಾವು ಇದ್ದಾಗ ಮಾತ್ರ ಭುಗಿಲೆದ್ದು ಮತ್ತೆ ಕ್ರಮೇಣ ತಣ್ಣಗಾಯಿತು. ಇದಕ್ಕೆ ಕಾರಣ ಅಂದೋಲನದಲ್ಲಿದ್ದು ಕೊಂಡೆ ವಿರೋಧಿಸಿದವರಿರಬಹುದು ಅಥವಾ ಹೊರಗಿದ್ದುಕೊಂಡು ಅದನ್ನು ವಿರೋಧಿಸಿರಬಹುದು. ಒಟ್ಟಾರೆ ಮೇಲ್ವರ್ಗವು ತನ್ನ ಹಿಡಿತವನ್ನು ಕೆಳಸ್ತರದವರ ಮೇಲೆ ಬಿಗಿಗೊಳಿಸಿತ್ತೆಂಬುದಂತು ನಿಜ.

*'ದೇಹಾರವ ಮಾಡುವ ಅಣ್ಣಗಳಿರಾ*
*ಒಂದು ತುತ್ತು ಆಹಾರವನ್ನಿಕ್ಕಿರೇ*
*ದೇಹಾರಕ್ಕೆ ಆಹಾರವೇ ನಿಚ್ಚಣಿಕೆ*
*ದೇಹಾರವ ಮಾಡುತ್ತ ಆಹಾರವ ನಿಕ್ಕದಿರ್ದಡೆ*
*ಆಹರನೆಲ್ಲಂದ ಅಂಬಿಗರ ಚೌಡಯ್ಯ'*[೩]

ಈ ವಚನದ ದನಿ ಹಸಿವಿನ ಕಡೆಗಿದೆ. 'ದೇಹಾರಕ್ಕೆ ಆಹಾರವೇ ನಿಚ್ಚಣಿಕೆ' ಎಂಬ ಮಾತಂತು ಅಧ್ಯಾತ್ಮಿಕತೆಗಿಂತ ಮೊದಲು ಅನ್ನ ಅವಶ್ಯ ಎನ್ನುವಲ್ಲಿ ಹಸಿವು ವ್ಯಕ್ತವಾಗಿರದೆ ಸಾಮುದಾಯಕ ಸಮಸ್ಯೆಯಾಗಿದ್ದು ಮುಖ್ಯ. ಹಸಿವಿನ ಅರಿವಿರುವ ಶರಣರ ಅಂತರಂಗದ ನುಡಿ ಇದು. ಈ ಮೇಲಿನ ವಚನದ ತುರ್ತು, ತೀವ್ರತೆ, ತಹತಹಗಳು ಸರ್ವರಿಗೂ ಸಾಧ್ಯವಿಲ್ಲ. ವಚನ ಚಳುವಳಿಯ ಗೊತ್ತುಗಳಿಗೆ ಎಲ್ಲವಚನಕಾರರು ಕಟ್ಟು ಬಿದ್ದಿದ್ದಾರೆ ಎಂಬುದಂತೂ ತುಂಬಾ ಅನುಮಾನಾಸ್ಪದ. ಉದಾಹರಣೆಗೆ "ವಚನಕಾರರು ಏಕದೇವೋಪಾಸನೆ, ಶಿವಸರ್ವೋತ್ತಮ ಭಾವದ ನೆಲೆಯಲ್ಲಿ ಜನರನ್ನು ಒಟ್ಟುಗೂಡಿಸಲು ಸೆಣಸಿದವರೆಂಬ ವಿಚಾರ ತಿರು ತಿರುಗಿ ಕೇಳಿ ಬರುತ್ತದೆ. ಆದರೆ ಇದೆಷ್ಟು ನಿಜ?

ವಚನಕಾರರು ಮೇಲು ಸಂಸ್ಕೃತಿಯ ಪರವಾಗಿದ್ದರು ಅಥವಾ ವಿರೋಧಿಯಾಗಿದ್ದರು ಎಂದು ಠರಾವು ಪಾಸುಮಾಡುವವರನ್ನು ಮತ್ತೆ ಮತ್ತೆ ಕಾಣುತ್ತೀವಿ. ಇಂಥ ಏಕಸಂಸ್ಕೃತಿಯ ಲೇಬಲ್ಲನ್ನು ವಚನಗಳು ನಿರಾಕರಿಸುತ್ತಿವೆ.[೪] ಕಾರಣ ಮೇಲಸ್ತರದಲ್ಲಿ ಕಂಡು ಬರುವ ವಚನಕಾರರ ವಚನಗಳ ಒಳಾರ್ಥವೆ ಬೇರೆ ಯಾವ ಪದಗಳು ಮೌಲಿಕವಾಗಿದ್ದವೊ ಅಂದರೆ ಗುರುಲಿಂಗ. ಜಂಗಮ ಪಾದೋದಕ ಪ್ರಸಾದ ಇಂತಹ ಪದಗಳನ್ನೇ ಅಪಮೌಲ್ಯಿಕರಿಸಿದಂತಿದೆ. ಅಧ್ಯಾತ್ಮಿಕತೆಗಿಂತ ಮೊದಲು ಅನ್ನ ಆಮುಖ್ಯ. ಇದು ಏಕ ಸಂಸ್ಕೃತಿಯ ಅರ್ಥವನ್ನು ನಿರಾಕರಿಸುವದನ್ನು ಕಾಣುತ್ತೇವೆ. ಆದರೆ

ಅದೆ ಮೇಲ್ವರ್ಗದವರಾದ ಬಸವಣ್ಣ, ಅಲ್ಲಮ, ಚೆನ್ನಬಸವಣ್ಣನಂತವರ ವಚನಗಳಲ್ಲಿ ಇಂತಹ ನೋವಿನ ದನಿ ಬರಲಿಕ್ಕಿಲ್ಲ.

*'ಉಳ್ಳವರು ಶಿವಾಲಯ ಮಾಡುವರು ನಾನೇನು ಮಾಡಲಿ*
*ಬಡವನಯ್ಯ, ಎನ್ನಕಾಲೆಕಂಬ, ದೇಹವೇ ದೇಗುಲ,*
*ಎನ್ನ ಶಿರವೇ ಹೊನ್ನ ಕಳಸವಯ್ಯ'*[೯], ಎನ್ನುವ

*ಬಸವಣ್ಣನ ಹಾಗೆಯೆ 'ಉಳ್ಳವರು ದೇವಾಲಯ ಮಾಡಿಸಲು*
*ನಾನೇನು ಮಾಡುವೆ ಬಡವನಯ್ಯ*
*ಎನ್ನೆರೆಡು ಕಾಲೆ ಕಂಬ, ದೇಹವೇ ದೇಗುಲ*
*ಶಿರಸ್ಸೆ ಹೊನ್ನಕಳಸವಯ್ಯ',*[೧೦]

ಎನ್ನುವ ಚೆನ್ನಬಸವಣ್ಣ ಇವರಿಬ್ಬರ ಈ ಎರಡು ವಚನಗಳಲ್ಲಿ ಗೊಡ್ಡು ಸಂಪ್ರದಾಯಗಳಿಂದ ಸಾಂಸ್ಥೀಕರಣಗೊಂಡಿದ್ದ ದೇವಾಲಯ, ಮಠ, ಮಾನ್ಯ, ವರ್ಗವನ್ನು ವಿರೋಧಿಸಿರುವ ದೃಷ್ಟಿ ಇದೆ. ಆದರೂ ಬಡವರನ್ನು ಸಮಾಧಾನ ಪಡಿಸಿ ಪರ್ಯಾಯವಾಗಿ ಮತ್ತೊಂದು ಕ್ರಿಯೆಯಲ್ಲಿ ತೊಡಗುವಂತೆ ಹೇಳಿದ್ದಾರೆ. ಇಲ್ಲಿ ಶ್ರೀಮಂತರು ಶಿವಾಲಯ ಮಾಡುವುದನ್ನು ಇವರು ನೇರವಾಗಿ ಪ್ರಶ್ನಿಸುತ್ತಿಲ್ಲ, ನಿರಾಕರಿಸುತ್ತಿಲ್ಲ, ಈ ಅಂಶಗಳನ್ನೊಳಗೊಂಡ ಅಲ್ಲಮ ಪ್ರಭುವಿನ ವಚನವನ್ನಿಲ್ಲಿ ಕಾಣಬಹುದು.

*'ಕಾಲೇ ಕಂಬಗಳಾದವೆನ್ನ*
*ದೇಹವೇ ದೇಗುಲವಾದುದಯ್ಯ*
*ಎನ್ನ ನಾಲಿಗೆಯೆ ಘಂಟೆ*
*ಶಿರ ಸುವರ್ಣದ ಕಳಶವಿದಯ್ಯ*
*ಸ್ವರವೇ ಲಿಂಗಕ್ಕೆ ಸಿಂಹಾಸನವಾಗಿರ್ದುದು ಗುಹೇಶ್ವರ*[೧೧]

ಇಲ್ಲಿ ಬಸವಣ್ಣ ಚೆನ್ನ ಬಸವಣ್ಣನವರಂತೆ ಬಡವ ಶ್ರೀಮಂತರ ಭಿನ್ನತೆಯಲ್ಲಿ ತಮ್ಮ ಒಲವು ಬಡವರ ಪರವಾದುದನ್ನು ಅತ್ಯಂತ ಪ್ರಜ್ಞಾಪೂರ್ವಕವಾಗಿ ತೋರಿದ್ದಾನೆ. ಸಂಪ್ರದಾಯಸ್ಥ ಮೌಲ್ಯಗಳನ್ನು ಧಿಕ್ಕರಿಸಿ ನವೀನ ಮೌಲ್ಯಗಳನ್ನು ತರುವ ಹಂಬಲ ಬಸವಣ್ಣನವರಲ್ಲಿ ಆದರೆ "ಅಲ್ಲಮನಲ್ಲಿ ಲೌಕಿಕವನ್ನು ಮಿರಬೇಕೆನ್ನುವ ತೀವ್ರವಾದ ಹಂಬಲವನ್ನು ತಿಳಿಯುವುದರ ಜೊತೆ ಲೌಕಿಕದ ವಿಶಿಷ್ಟ ಸ್ವರೂಪಗಳಾದ ಸಂಸ್ಕೃತಿ, ಸಮಾಜವನ್ನು ಕುರಿತ ಹಾಗೆ ಅವನ ದಿವ್ಯ ನಿರ್ಲಕ್ಷ್ಯವನ್ನು ಗುರುತಿಸ ಬಹುದಾಗಿದೆ. ಸಂಸ್ಕೃತಿಯ ಹೊಸ ಆಶಯಗಳಿಗಾಗಿ ಪ್ರಯತ್ನಿಸುವುದೇ ಹೆಚ್ಚು ಖಚಿತವಾದದ್ದು ಎಂದು ಅಲ್ಲಮ ನಂಬಿದ್ದಾನೆ, ತನ್ನನ್ನು ತಾನು ಅರಿಯುವ ನೆಲೆಗಳು ಸಾಮಾಜಿಕ ಕಟ್ಟು ಪಾಡುಗಳಿಂದ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆಯಬೇಕೆಂದು ಅಲ್ಲಮನು ಭಾವಿಸುತ್ತಾನೆ.[೧೨] ಆದರೆ ಕೆಳಸ್ತರದ ವಚನಕಾರ ಚೌಡಯ್ಯನ ವಚನವನ್ನು ಕಂಡಾಗ ಇವರು ವೈಯಕ್ತಿಕ ಮತ್ತು ಸಾಮಾಜಿಕ ನೆಲೆಗಳನ್ನು

ಸಮ್ಮಿಳಿತಗೊಳಿಸಿಕೊಂಡಿದ್ದು ಕಂಡಾಗ ಇವರ ವಿಚಾರಗಳಲ್ಲಿ ಭಿನ್ನಂತೆ ಮೈದಳೆದಿರುವುದು ಸ್ಪಷ್ಟವಾಗಿದೆ. ಚೌಡಯ್ಯನ ಆಕ್ರೋಶ ಬಹುಶಃ ಬೇರ ಯಾರ ವಚನದಲ್ಲಿಯೂ ಮುಕ್ತವಾಗಿಲ್ಲ, ದೇಹವೇ ದೇಗುಲ, ಕಾಲುಕಂಬ, ಶಿರ ಹೊನ್ನಕಳಸವಾಗುವ ಪರಿ ಮತ್ತು ಒಂದು ತುತ್ತು ಆಹಾರವನ್ನಿಕ್ಕಿರೆ ಎಂಬ ಹಸಿವಿನ ಲೋಕದ ಕೂಗಿಗೂ ಇರುವ ಭಿನ್ನಸ್ವರ ಗಮನಾರ್ಹವಾದುದು. ಈ ದೃಷ್ಟಿ ಭಿನ್ನತೆ ವರ್ಗ ಸೂಕ್ಷ್ಮಗಳನ್ನು ಸ್ಪಷ್ಟಪಡಿಸುವುದು.

'ಶಿವಭಕ್ತಿಯ ನೆಲೆಯಲ್ಲಿ ನಡೆದ ಈ ಚಳುವಳಿ ಮೂಲತಃ ಸಾಮಾಜಿಕ ಧಾರ್ಮಿಕ ಸ್ವರೂಪದಾಗಿದ್ದು, ವೈಧಿಕ ಧರ್ಮದ ಚಾತುರ್ವರ್ಣ ಕಲ್ಪನೆಯಿಂದ ಕೂಡಿ ಜಡವಾದ ಸಾಮಾಜಿಕ ಅಸಮಾನತೆಗಳ ವಿರುದ್ಧವಾಗಿ ನಿಂತು, ಅದಕ್ಕೆ ಪ್ರತಿಯಾಗಿ ಜಾತಿ, ವರ್ಗ, ಲಿಂಗಭೇಧಗಳಿಲ್ಲದ ಸಮಾನತಾ ಸಮಾಜ ವೊಂದನ್ನು ನೆಲೆಗೊಳಿಸುವ ಧರ್ಮವೊಂದನ್ನು ಸ್ಥಾಪಿಸುವ'[೨೨] ಉದ್ದೇಶದಿಂದ ಪ್ರಾರಂಭಗೊಂಡಿದ್ದೇನೋ ನಿಜವೆ, ಆದರೂ ಜಾತಿ ವ್ಯವಸ್ಥೆಯ ಶ್ರೇಣೀಕರಣ ಸಂಪೂರ್ಣವಾಗಿ ನಾಶವಾಗಲಿಲ್ಲ ಏಕೆ? ಎಂಬ ಪ್ರಶ್ನೆ ತಲೆ ಎತ್ತುವದು. ಕಾರಣ ಈ ಚಳುವಳಿಯಲ್ಲಿ ಭಕ್ತಿ ಪ್ರೇರಣೆಯೇ ಮುಖ್ಯವಾಗಿತ್ತು, ಲೌಕಿಕ ವನ್ನು ಬಿಟ್ಟು ಪಾರಲೌಕಿಕ ಸುಖಕ್ಕೆ ಜೋತುಬಿದ್ದವರೆ ಹೆಚ್ಚು.

*'ಅಂಬಿಗ ಅಂಬಿಗ ಎಂದು ಕುಂದು ನುಡಿಯದಿರು*
*ನಂಬಿದರೆ ಒಂದೇ ಹುಟ್ಟಲಿ ಕಡೆಯ*
*ಹಾಯಿಸುವ ಅಂಬಿಗರ ಚೌಡಯ್ಯ'*[೨೩]

ಇದು ಕಾಯಕದ ಗೌರವ ಆತ್ಮಾಭಿಮಾನ ಮೆರೆದುದಲ್ಲದೆ ನೈತಿಕತೆಗೆ ಸವಾಲುಹಾಕಿ ವ್ಯಕ್ತಿತ್ವದ ಔನ್ನತ್ಯ ಮೆರೆದಂತೆ ಕಾಣುವರು. ಈ ನುಡಿಯ ಹಿನ್ನೆಲೆ ವಿವೇಚಿಸಿದಾಗ ಆದರ್ಶ ವಾಸ್ತವತೆಗಳ ನಡುವಿನ ಸಂಘರ್ಷದ ಧ್ವನಿ ಎಂದು ಸ್ಪಷ್ಟವಾಗುವದು. ಇವರು ಉಪೇಕ್ಷೆ, ಅವಮಾನ ಕೀಳಿರಿಮೆಗೆ ಒಳಗಾಗಿರಲಿಕ್ಕೆ ಸಾಕು, ಜಾತಿ ಭೇದದ ಬೇರನ್ನೆ ಬುಡ ಸಮೇತ ಕಿತ್ತು ಹಾಕಲು ಶ್ರಮಿಸಿದ ಈ ಚಳುವಳಿಯಲ್ಲಿ 'ಅಂಬಿಗ ಅಂಬಿಗ ಎಂದು ಕುಂದು ನುಡಿಯದಿರಿ' ಎನ್ನುವಲ್ಲಿ 'ಜಗದ ಕೊಳೆಯ ತೊಳೆವ ಮಡಿವಾಳ ನಾನೆಂದು' ಮಡಿವಾಳ ಮಾಚಯ್ಯ ಹೇಳುವಲ್ಲಿ ಮಡಿವಾಳನೆಂದು ಕುಹಕದಿಂದ ನುಡಿದಾಗ ವ್ಯವಸ್ಥೆಗೆ ದಿಟ್ಟವಾಗಿ ಕೊಟ್ಟ ಉತ್ತರವಿದು. ಹಾಗಾದರೆ ಮೇಲು-ಕೀಳಿನ ಕೀಳಿರಿಮೆಗಳು ಸಂಪೂರ್ಣವಾಗಿ ಹೋಗಿದ್ದವು. ಹಾಗಿದ್ದಲ್ಲಿ ಅವರ ದನಿ ಈ ನಿಟ್ಟಿನಲ್ಲಿ ಮಿಡಿದಿದ್ದೇಕೆ? ಎನ್ನುವ ಪ್ರಶ್ನೆಗಳು ತಲೆ ಎತ್ತುತ್ತಿವೆ. ಇವರಿಬ್ಬರು ವೃತ್ತಿ ಬಗ್ಗೆ ಅಭಿಮಾನ ಹೊಂದಿದ್ದು ವ್ಯವಸ್ಥೆಯ ಉಪೇಕ್ಷೆಗೆ ಒಳಗಾಗಿರುವದಂತು ನಿಜವೇ ಆಗಿದೆ. ನೆಲೆಗೊಂಡ ಮೌಲಿಕ ಕಲ್ಪನೆಯನ್ನು ಪಲ್ಲಟಗೊಳಿಸಲು ಕೀಳನ್ನು ಮೌಲ್ಯೀಕರಿಸಲು ಪ್ರಯತ್ನಿಸಿದ್ದಾರೆ.

*"ಅನಿಮಿಷ ಕೈಯ ಲಿಂಗದಲ್ಲಮ ಕೊಂಡು ಎಲ್ಲಾಗಿ*
*ಆದಿಯಲ್ಲಿ ಬಸವಂಗೆ ಗುರುಲಿಂಗವಿಲ್ಲಾಗಿ*
*ಬಸವ ಚೆನ್ನಬಸವಂಗೆ ಕಾರಣವಿಲ್ಲಾಗಿ*
*ಇವರಾರೆಂಬುದ ಕೇಳಿದ್ದು ಇಲ್ಲ ಇಲ್ಲಾ ಎಂದನು*
*ಇವರಿಬ್ಬರ ಸಾಹಿತ್ಯ ಇಲ್ಲೆಂಬುದು ಕಂಡ*
*ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ"* ಎಂದೆನು[೧೫]

ಎಂದ ಘಟ್ಟಿವಾಳಯ್ಯ ಒಬ್ಬ ವಿಲಕ್ಷಣ ವಚನಕಾರ, ಅಲ್ಲಮ ಬಸವಣ್ಣನವರು ಬೋಧಿಸಿದ ಪೂಜಾ ಕ್ರಮವನ್ನು ಆಚರಣೆಗಳನ್ನು ಈತ ಧಿಕ್ಕರಿಸುತ್ತಾನೆ. ದೇಗುಲ ಸಂಸ್ಕೃತಿಯನ್ನು ಸಾಮಾಜಿಕ ಮೇಲಸ್ತರವನ್ನು ನಿರಾಕರಿಸುತ್ತಾ ಪ್ರತಿರೋಧಿಸಿದ್ದು ಸಾಮಾನ್ಯವೇನಲ್ಲ.

ಕೆಳಸ್ತರದ ನೆಲೆಯಲ್ಲಿ ಕಂಡು ಬರುವ ಜನರಿಗೆ ಅನುಗ್ರಹವ ಮಾಡಿ ಶಿವಾಚಾರ ಹೇಳುತ್ತಾ ಕೆಳವರ್ಗದವರ ಮನೆಯಲ್ಲಿ ಊಟಮಾಡದೆ ಅಕ್ಕಿ, ಕಣಕ, ಕೊಂಡೊಯ್ಯುವ ಗುರುಗಳನ್ನು ನೇರ ನುಡಿಗಳಿಂದ ವ್ಯಂಗ್ಯವಾಗಿ ಟೀಕಿಸಿದ್ದಾರೆ.

*"ಕುಲ ಹೀನ ಶಿಷ್ಯಂಗೆ ಅನುಗ್ರಹವ ಮಾಡಿ*
*ತಿರುಗಿ ಅವನ ಮನೆಯಲ್ಲಿ ಉಣ್ಣಬಾರದೆಂದು*
*ಅಕ್ಕಿಕಣವ ಕೊಂಡು ಹೋಗುವ ಗುರುವಿನ ಕಂಡರೆ*
*ಕೆಡವಿ ಮೂಗನೆ ಕೊಯ್ದು*
*ಇಟ್ಟಂಗಿ ಕಲ್ಲಿಲೆ ತಿಕ್ಕಿ*
*ಸಾಸಿವೆಯ ಹಿಟ್ಟನೆ ತಳಿದು*
*ಮೇಲೆ ಲಿಂಬಿಯ ಹುಳಿಯನೆ ಹಿಂಡಿ*
*ಪಡುವಣ ಗಾಳಿಗೆ ಹಿಡಿಯೆಂದಾತ ನಮ್ಮ ಅಂಬಿಗರ ಚೌಡಯ್ಯ'*[೧೬]

ಇಲ್ಲಿ ಅಂಬಿಗರ ಚೌಡಯ್ಯ ನೆಲೆಗೊಂಡ ಮೌಲಿಕ ಕಲ್ಪನೆಯನ್ನು ಪಲ್ಲಟಿಸಿದ್ದಲ್ಲದೆ 'ಕೀಳನ್ನು' ಮೌಲ್ಯೀಕರಿಸಲು ಪ್ರಯತ್ನಿಸಿದ್ದು ಕಡಿಮೆ ಏನಲ್ಲ, ಈ ಕ್ರೋದ ಆಕ್ರೋಶ ಸುಮ್ಮನೆ ಬರುವಂತಹದ್ದಲ್ಲ, ಅವಮಾನದ ನೆಲೆಯಿಂದ ಮೂಡಿದ್ದು ತಿರಸ್ಕೃತಗೊಂಡವರ ಅಂತರಂಗದ ನೋವಿನಿಂದ ಬಂದದ್ದು.

"ವಚನಗಳ ಭಾಷೆ ಸಂಧಿಗ್ಧವಾದುದು ಶರಣರ ಆಂದೋಲನದಲ್ಲಿ ಪಾಲ್ಗೊಂಡ ವಚನಕಾರರು ಬೇರೆ ಬೇರೆ ಸಂಸ್ಕೃತಿಗಳ ಹಿನ್ನೆಲೆಯಲ್ಲಿ ಬಂದವರು. ಅವರೆಲ್ಲಾ ಹೊಸದೊಂದು ಮಾರ್ಗಹಿಡಿದಾಗ ಹಳೆಯ ದೂಳನ್ನು ಪೂರ್ತಿಕೊಡವಿ ಮೇಲೇಳಲಾಗಲಿಲ್ಲ, ಕೆಲವು ಸಲ ವಚನಗಳ ಭಾಷೆ ಈ ವಿಭಿನ್ನ ಸಂಸ್ಕೃತಿಗಳ ನೋಟದ ಬಗೆಗಳ ರಣಾಂಗಣವಾದರೆ ಕೆಲವು ಸಲ ಸಂಧಾನ ಸ್ಥಾನವಾಗುತ್ತದೆ.[೧೭]

ಉದಾ : *ಉಂಬುವುದು ಉಡುವುದು ಶಿವಾಚಾರ*
*ಕೊಂಬುವುದು ಕೊಡುವುದು ಕುಲಾಚಾರ*

*ಎಂಬ ಅನಾಚಾರಿಯ ಮಾತು ಕೇಳಲಾಗದು*
*ವಿಪ್ರಮೊದಲು ಅಂತ್ಯಜ ಕಡೆಯಾಗಿ*
*ಶಿವಭಕ್ತರ ಒಂದೆ ಎಂದು*
*ಕೊಟ್ಟು ಕೊಂಬುದು ಸದಾಚಾರ*
*ಉಳಿದುವೆಲ್ಲ ಅನಾಚಾರ*[೮]

ಎನ್ನುವಲ್ಲಿ ಚೆನ್ನಬಸವಣ್ಣ ತನ್ನ ಸುತ್ತಲಿನ ಶರಣರ ಇಬ್ಬಂದಿತ ಬದುಕನ್ನು ಖಂಡಿಸಿರುವುದೇನೋ ನಿಜವೇ. ಆದರೂ ಈ ಚೆನ್ನಬಸವಣ್ಣನವರ ನಿಷ್ಠುರ ನುಡಿಗಿಂತ ನೋವಿನ ಮೂಲದ ಚೌಡಯ್ಯನ ವಚನ ವಿಭಿನ್ನ ಸ್ವರೂಪದಲ್ಲೆ ಕಾಣುವುದು ಮುಖ್ಯ. ಶಿವ ಸಂಸ್ಕೃತಿಯ ನೆರಳಲ್ಲಿ ಬದುಕಿದರೂ ತಮ್ಮ ವೃತ್ತಿ ಮತ್ತು ಪ್ರವೃತ್ತಿಗಳನ್ನು ಬಿಟ್ಟು ಕೊಡದೆ ತಮ್ಮ ವೃತ್ತಿಗಳನ್ನೇ ಸಮರ್ಥಿಸಿಕೊಂಡದ್ದುಂಟು.

*'ಕುರಿಕೋಳಿ ಕಿರುಮೀನ ತಿಂಬವರ*
*ಊರೊಳಗೆ ಇರು ಎಂಬರು*
*ಅಮೃತಾನ್ನವ ಕರೆವ ಗೋವ ತಿಂಬವರ*
*ಊರಿಂದ ಹೊರಗಿರು ಎಂಬರು*
*ಆತನು ಹರಗೋಲಾಯಿತ್ತು*
*ಬೊಕ್ಕಣ ಸಿದಿಕೆ ಬಾರುಕೋಲು ಪಾದರಕ್ಷೆ*
*ದೇವರ ಮುಂದೆ ಬಾರಿಸುವುದಕ್ಕೆ ಮದ್ದಳೆಯಾಯಿತ್ತು.*
*ಈ ಬುದ್ದಲಿಕೆಯೊಳಗಣ ತುಪ್ಪವ ಶುದ್ಧಮಾಡಿ*
*ತಿಂಬ ಗುಜ್ಜಹೊಲೆಯರ ಕಂಡಡೆ*
*ಉದ್ದನ ಚಮ್ಮಾಳಿಗೆಯ ತೆಕ್ಕೊಂಡು*
*ಬಾಯಿಕೊವೆನು ಎಂದಾತನಮ್ಮ ಅಂಬಿಗರ ಚೌಡಯ್ಯ*[೧೯]

ಇಲ್ಲಿ ವಸ್ತು ಸ್ಥಿತಿ ತಾರ್ಕಿಕತೆಯಿಂದ ಕೂಡಿದ್ದು ವೈದಿಕ ಧರ್ಮದ ವರ್ಣಾಶ್ರಮ ನೀತಿಯನ್ನೇ ನೇರವಾಗಿ ಪ್ರಶ್ನಿಸಿದ್ದು ಪ್ರಮುಖ. ಕೀಳೀಕರಣಗೊಂಡ ಜನಸಮುದಾಯ ಅನುಭವಿಸಿದ ಅನುಭವಿಸುತ್ತಿರುವ ಅವಮಾನ ಬೇಗುದಿ ಈ ವಚನದಲ್ಲಿ ವ್ಯಕ್ತವಾಗಿದೆ. ಇವೆ ಅಂಶಗಳನ್ನು ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯ ವಚನದಲ್ಲಿ ಕಾಣಬಹುದಾಗಿದೆ.

*"ಕುರಿಕೋಳಿ ಕಿರುಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂಬರು*
*ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳು ಜಾತಿಯೆಂಬರು*
*ಅವರೆಂತು ಕೀಳು ಜಾತಿಯಾದಾರು ಜಾತಿಗಳೇ ನೀವೇಕೆ ಕೀಳಾದಿರೋ?"*[೨೦]

ಎನ್ನುವ ಕಾಳವ್ವೆಯ ವಚನದ ದನಿ ಮತ್ತು ಅಂಬಿಗರ ಚೌಡಯ್ಯನ ವಚನ ಈ ಎರಡರಲ್ಲಿ ಅನೇಕ ಸಾಮ್ಯತೆಗಳನ್ನು ಕಂಡುಕೊಳ್ಳಬಹುದಾಗಿದೆ. ಕಾರಣ ಅವರಿಬ್ಬರ ಒಡಲಾಳದ ನೋವು ಒಂದೇ ಆಗಿದ್ದು ಜೀವಂತ ಪ್ರಾಣಿಗಳನ್ನು ತಿನ್ನುವವರು ಮೇಲು, ಸತ್ತ ಪ್ರಾಣಿಗಳನ್ನು ತಿಂದವರು ಕೀಳು

ಎನ್ನುವ ಪರಿಸರದಲ್ಲಿ ಶಿವನಿಗೆ ಪಂಚಾಮೃತ ಕರೆವ ಪಶುವ ತಿಂಬ ನಾವು ಹೇಗೆ ಕೀಳು? ಕುರಿಕೋಳಿ ಕಿರು ಮೀನುಗಳನ್ನು ಬಲಿಕೊಡುವವರು ಮಾತ್ರ ಶ್ರೇಷ್ಠರು ಹೇಗೆ? ಅಂತವರು ಊರೊಳಗಿರಲು ನಾವೇಕೆ ಊರ ಹೊರಗಿರಬೇಕು? ಎನ್ನುವಲ್ಲಿ ಅವರಿಗಿಂತ ನಾವು ಕನಿಷ್ಠವಲ್ಲ ಶ್ರೇಷ್ಠರೇ ಎನ್ನುವ ಮಾತು ವ್ಯಕ್ತವಾಗುವುದಲ್ಲದೆ, ತೊಗಲ ಬಾನಿಯಿಂದ ಎತ್ತಿದ ನೀರನ್ನು ಪವಿತ್ರವೆಂದು ಬಳಸುವ ಅವರು ಹೊಲೆಯಲ್ಲವೆ? ಅಂತವರು ಗುಜ್ಜ ಹೊಲೆಯರು ಎಂದು ಖಂಡಿಸಿದ್ದಾನೆ. ಜಾತಿಗಳೇ ನೀವೇಕೆ ಕೀಳಾದಿರೋ ಎನ್ನುವಲ್ಲಿ ತಮ್ಮ ಜನತೆಗೆ ಆತ್ಮಸ್ಥೈರ್ಯ ತುಂಬಿರುವದಲ್ಲದೆ ಉನ್ನತ ಜಾತಿಗಳನ್ನು ಪ್ರಶ್ನಿಸಿದ್ದು ಪ್ರಮುಖ. ಇಲ್ಲಿ ನೋವು ದೀನತೆಯ ಧ್ವನಿಯಾಗದೆ ಆತ್ಮಭಿಮಾನ ನೈತಿಕ ಅಧಿಕಾರ ಎದ್ದು ತೋರುವುದು ಇಲ್ಲಿನ ವಿಶೇಷ.

'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ' ಎಂಬಲ್ಲಿ ಬಸವಣ್ಣನವರ ಆತಂಕವಿದೆ. ನಿರ್ದಾಕ್ಷಿಣ್ಯವಾಗಿ, ನಿರ್ಭೀಡೆಯಿಂದ ಹೇಳುವಲ್ಲಿ ಅಳುಕಿದೆ. ವ್ಯಕ್ತಿಗತ ನೆಲೆಯಿಂದ ತನ್ನನ್ನೆ ತಾನು ತೊಡಗಿಸಿಕೊಂಡು ಇವನಾರವ ಎಂದೆನ್ನದೆ ಇವ ನಮ್ಮವ ಎನ್ನುವ ತಳಮಳದಲ್ಲಿ ತನ್ನ ಹುಟ್ಟನ್ನೆ ಬಳಸಿಕೊಂಡಿದ್ದಾನೆ.

*'ಚೆನ್ನಯ್ಯನ ಮನೆಯ ದಾಸಿಯ ಮಗನು*
*ಕಕ್ಕಯ್ಯನ ಮನೆಯ ದಾಸಿಯ ಮಗಳು*
*ಇವರಿಬ್ಬರು ಹೊಲದಲ್ಲಿ ವೆರಣಿಗೆ ಹೋಗಿ*
*ಸಂಗವ ಮಾಡಿದರು*
*ಇವರಿಗೆ ಹುಟ್ಟಿದ ಮಗ ನಾನು*
*ಕೂಡಲ ಸಂಗಮದೇವ ಸಾಕ್ಷಿಯಾಗಿ'*[೨೧]

ಎಂದು ಬಸವಣ್ಣ ತನ್ನ ಹುಟ್ಟನ್ನೆ ಸಾಮಾಜಿಕ ನೀತಿಯ ಅಪವಿತ್ರತೆಯ ಪಲ್ಲಟದಲ್ಲಿ ಪವಿತ್ರಗೊಳಿಸಿಕೊಂಡಿರುವ ಭಾವ ವಿಶೇಷವಾದದ್ದು. ಆದರೂ ಇವರ ಕ್ರಿಯೆ-ಅರಿವುಗಳ ಮೂಲಕ ಆಂತರಿಕ ದ್ವಂದ್ವಗಳನ್ನು ಗುರುತಿಸಬಹುದಾಗಿದೆ.

ಅಲ್ಲದೆ - *'ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತೆಂಬರು*
*ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು*
*ಎಂತಯ್ಯ ಅವರ ಭಕ್ತನೆಂಬೆ?*
*ಕೂಡಲಸಂಗಮದೇವ, ಕೇಳಯ್ಯ*
*ಹೊಲತಿ ಶುದ್ಧನೀರ ಮಿಂದಂತಾಯಿತ್ತಯ್ಯ,'*[೨೨]

ಬಸವಣ್ಣನವರ ಈ ವಚನದಲ್ಲಿ ದುಗುಡ, ದ್ವಂದ್ವಗಳು ತುಂಬಿಕೊಂಡಂತೆ ಎದ್ದುಕಾಣುವುದು.

'ಹೊಲತಿ ಶುದ್ಧ ನೀರ ಮಿಂದಂತಾಯಿತ್ತಯ್ಯ' ಎನ್ನುವ ವಾಚ್ಯೆ ಏನನ್ನು ಸೂಚಿಸುವುದು? ಹಾಗಾದಾರೆ ವಚನಕಾರರೆಲ್ಲರು ಜಾತಿಯ ಉಪಾದಿಯಯನ್ನು ಕಿತ್ತೊಗೆದು ಸಮಾನ ಮುಕ್ತ ಸಮಾಜ ಕಟ್ಟಿದವರೆಂದು ಹೇಳುವುದು ಹೇಗೆ? ವಚನ ಚಳುವಳಿ ವೈದಿಕಕ್ಕೆ ಸಮಾನಾಂತರ ಎನ್ನಲು ಬಾರದು. ಯಾಕೆಂದರೆ ಕೀಳೆಂದು ಪರಿಗಣಿತವಾಗಿದ್ದ ದಲಿತರನ್ನು ಅದು ಶಿವಭಕ್ತಿಯ ಚೌಕಟ್ಟಿನಲ್ಲಿ ತಂದು ಅವರಲ್ಲಿ ಸ್ವಾಭಿಮಾನ ಬೆಳೆಸಿತು. ಚಲನೆಯೇ ನಿಂತು ಹೋಗಿದ್ದ ಜಾತಿವ್ಯವಸ್ಥೆಯಲ್ಲಿ ಸ್ವಲ್ಪವಾದರೂ ಚಲನೆ ಕಾಣಿಸಿತು. ವಚನ ಚಳುವಳಿಯನ್ನು ವೈದಿಕಕ್ಕೆ ಪರ್ಯಾಯ ಎನ್ನಲೂ ಬಾರದು, ಕಾರಣ ಶಿವಭಕ್ತರಾಗದ ದಲಿತರ ಬಗ್ಗೆ, ಜನಪದ ಧರ್ಮಗಳ ಬಗ್ಗೆ ವೈಧಿಕರು ಹೊಂದಿದ ತಿರಸ್ಕಾರವನ್ನು ಇದು ತೋರಿತು. ಹಾಗಾದರೆ ವಚನ ಚಳುವಳಿ ನಿಜವಾಗಿ ಏನಾಗಿತ್ತು? ಕೆಲಮಟ್ಟಿಗೆ ಪರ್ಯಾಯವಾಗಿ, ಕೆಲಮಟ್ಟಿಗೆ ಸಮಾನಾಂತರವೂ ಆಗಿತ್ತೆನ್ನಬಹುದು.[೨೨] ವಚನಕಾರರ ಇಕ್ಕಟ್ಟುಗಳನ್ನು ಕಂಡಾಗ ಈ ಅಂಶ ಎದ್ದುತೋರುವದು. ಕೆಳವರ್ಗದವರು ತಮ್ಮ ಹಳೆಯ ಗುರುತುಗಳನ್ನು ಬಿಡದೆ ಹೋದದ್ದು ಇವು ಕ್ರಮೇಣ ಸಂಪ್ರದಾಯಸ್ಥ ನಿಲುವುಗಳ ಬೆಳವಣಿಗೆಗೆ ಕಾರಣವಾದುದಷ್ಟೇ ಅಲ್ಲ, ಮತೀಯ ಪ್ರವೃತ್ತಿಗಳು ಹೆಚ್ಚಾದಂತೆ ಜಾತಿಯನ್ನು ಕುರಿತ ಹಾಗೆ ಹಿಂದೂ ಧಾರ್ಮಿಕ ವ್ಯವಸ್ಥೆಯ ಶ್ರೇಣಿಕರಣ, ಪವಿತ್ರ ಅಪವಿತ್ರತೆಯ ಕಲ್ಪನೆಗಳು ಬೇರುಗೊಳ್ಳ ತೊಡಗಿದ್ದು ಸ್ಪಷ್ಟವಾಗುವುದು.

'ಅರಿತರೆ ಶರಣ-ಮರೆತರೆ ಮಾನವ' ಎನ್ನುವ ಬಸವಣ್ಣ ಉಕ್ತಿಗೂ 'ಅರಿದು ಕೊಂಡಲ್ಲಿ ಸುಧೆ ಮರೆದುಕೊಂಡಲ್ಲಿ ಸುರೆ' ಎನ್ನುವ ಹೆಂಡದ ಮಾರಯ್ಯನ ಸಂಕೀರ್ಣದ ಊಕ್ತಿಗೂ ಅಂತರವಿರುವುದು ಸ್ಪಷ್ಟ. ಇಲ್ಲಿ 'ಕೆಳವರ್ಗದ ವಚನಕಾರರ ಅಭಿವ್ಯಕ್ತಿ ಶಿಷ್ಟವಚನಕಾರರಿಗಿಂತ ಭಿನ್ನವಾಗಿರುವ ಸ್ಪಷ್ಟ ಕಾರಣ ಅವರು ಬೆಳೆದ ವಾತಾವರಣ, ಬದುಕಿನಲ್ಲಿ ಪಡೆದ ಅನುಭವಗಳು, ನಿತ್ಯ ಪ್ರತಿಷ್ಟಿತ ವರ್ಗಗಳ ಕಪಿಮುಷ್ಠಿಯಲ್ಲಿ ಸಿಲುಕಿ ನೋಂದು ಬೆಂದವರಾದ ಕೆಳವರ್ಗದ ವಚನಕಾರ ಅಭಿವ್ಯಕ್ತಿ ಮಾರ್ಗ ಬೇರೆಯೇ ಆಗಿತ್ತು. 'ಅಟ್ಟಿಯ ಚುಚ್ಚುವ ಉಳಿಮೊನೆಯಲ್ಲಿ ಪ್ರತ್ಯಕ್ಷನಾದ ಪರಮೇಶ್ವರನನ್ನು ಕಂಡು ಇತ್ತಲೇಕಯ್ಯ ಬಂದೆ? ಕಾಯದ ತಿತ್ತಿಯ ಹೋತ್ತಾಡುವನತ್ತ' ಎನ್ನುವ ಮಾದಾರ ದೂಳಯ್ಯ ಅಸ್ಪೃಶ್ಯತೆಯನ್ನು ಸವಾಲಾಗಿ ಸ್ವೀಕರಿಸಿ ಪವಿತ್ರೀಕರಿಸಿದ ದೇವ ಅಪವಿತ್ರಗೊಳ್ಳುವ ಮೇಲಾಗಲೊಲ್ಲದೆ ಕೀಳಿಕರಣಕ್ಕೊಳಪಡುವ ಪರಮೇಶ್ವರನನ್ನು ಪ್ರಶ್ನಿಸಿದ್ದು ಸಾಮಾನ್ಯವೇನಲ್ಲ

*ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ*
*ಪ್ರತ್ಯಕ್ಷನಾದ ಪರಮೇಶ್ವರನ ಕಂಡು,*
*ಇತ್ತಲೇಕಯ್ಯ ಕಾಯದ ತತ್ತಿಯ ಹೊತ್ತಾಡುವವನ ಮುಂದೆ*
*ನಿನ್ನ ಭಕ್ತರ ಠಾವಿನಲ್ಲಿಗೆ ಹೋಗಿ ಮುಕ್ತಿಯ ಮಾಡು*

*ನೀ ಹೊತ್ತು ಬಹುರೂಪ ತಪ್ಪದೆ*
*ರಜತದ ಬೆಟ್ಟದ ಮೇಲಕ್ಕೆ ಹೋಗು*
*ನಿನ್ನ ಭಕ್ತರ ಮುಕ್ತಿಯ ಮಾಡು*
*ಕಾಮಧೂಮಧೂಳೇಶ್ವರನ ಕರುಣದಿಂದ*
*ನೀನೆ ಬದುಕು'*

ಎನ್ನುವ ಮಾದಾರ ಧೂಳಯ್ಯನ ಈ ವಚನವು ಹಲವಾರು ಒಳಾರ್ಥಗಳನ್ನು ಒಳಗೊಂಡಿದ್ದು ಸ್ಪಷ್ಟವಾಗುವುದು. ಕಾಯಕದಲ್ಲಿ ನಿರತಗೊಂಡಾಗ ಸ್ವತಃ ಪರಮೇಶ್ವರನೇ ಪ್ರತ್ಯಕ್ಷವಾದಾಗ ಚಂಚಲ ಚಿತ್ತನಾಗದೆ ದೇವರನ್ನೇ ಪ್ರಶ್ನಿಸುವ ರೀತಿ ಮುಖ್ಯ. ಇದು ಧೂಳಯ್ಯನ ಕಾರ್ಯಕ್ಷಮತೆಯನ್ನು ಸೂಚಿಸುವುದಲ್ಲದೆ ಕಾಯಕದ ಬಗ್ಗೆ ಕೆಳವರ್ಗಗಳಿಗಿದ್ದ ಶ್ರದ್ಧೆಯನ್ನು ಗ್ರಹಿಕೆಗೆ ತರುತ್ತದೆ. ಕಾರಣ ಸದಾ ಮುಕ್ತಿ, ಕೈಲಾಸ, ಇಷ್ಟಲಿಂಗ ಎಂಬುದಾಗಿ ಬಡಿದಾಡುವ ನಿತ್ಯಭಕ್ತರನ್ನು ಬಿಟ್ಟು ನನ್ನಂತಹ ಎಕ್ಕಡ ಚುಚ್ಚುವವನ ಮುಂದೆ ಬಂದದ್ದೇಕೆ? ಆತನ ಆತ್ಮಸ್ಥೈರ್ಯ ಇಡೀ ಶರಣ ಸಂಸ್ಕೃತಿಯನ್ನೇ ಪ್ರಶ್ನಿಸಿದಂತಿದೆ. ಅಲ್ಲದೆ 'ನಿನ್ನ ಭಕ್ತರ ಠಾವಿನಲ್ಲಿ ಹೋಗಿ ಮುಕ್ತಿ ಮಾಡು' ಧೂಳೇಶ್ವರನ ಕರುಣದಿಂದ ನೀನೆ ಬದುಕು ಎಂದು ಶಿವನಿಗೆ ತಿಳಿಹೇಳುವದನ್ನು ಕಂಡಾಗ ಇತನು ಏರಿದ ಆಧ್ಯಾತ್ಮದ ನಿಲುವು ಎದ್ದುತೋರುವುದು. ಇದು ಕೆಳಸ್ತರದ ಜನರಲ್ಲಿ ಸುಪ್ತವಾಗಿದ್ದ ಪ್ರತಿಭಟನಾ ಧೋರಣೆ, ಆತ್ಮಸ್ಥೈರ್ಯ ಹಾಗೂ ಜೀವನಪ್ರೀತಿಯನ್ನು ಸ್ಪಷ್ಟಪಡಿಸುವುದು.

*'ಮದ್ದಿನ ಸುರೆಯ ತೊಗಲ ತಿತ್ತಿಯಲ್ಲಿ ತುಂಬಿ*
*ಒಪ್ಪದಲ್ಲಿ ನಿಲಿಸಕೆ ಆದು ತನ್ನ ಉತ್ಪಾತದಿಂದ ತಿತ್ತಿ*
*ಹಾರಿ ನೆಲಕ್ಕೆ ಅಪ್ಪಳಿಸಿ ಬೀಳುವುದು ಕಂಡೆ! ದೃಷ್ಟವ ಕೇಳಲೇತಕ್ಕೆ*
*ಕಾಯದ ತಿತ್ತಿಯಲ್ಲಿ ಜೀವ ಹೊಕ್ಕು ತ್ರಿವಿಧ ಕುಲವ*
*ಕಟ್ಟಿ ನಡೆವುದಕ್ಕೆ ಕಣ್ಣಲಿ ಮರೆಯಾಯಿತ್ತು.'*

ಎನ್ನುತ ಜಾತಿ ಮತಾಂಧರ ಅಮಲನ್ನು ಚಿತ್ರಿಸುವ ಹೆಂಡದ ಮಾರಯ್ಯನ ಅಭಿವ್ಯಕ್ತಿಯಲ್ಲಿರುವ ಮೊನಚನ್ನು ಮೇಲಸ್ತರದ ವಚನಕಾರರಲ್ಲಿ ಕಾಣಲಾಗದು, ತಮ್ಮ ವೃತ್ತಿ ಪರಿಭಾಷೆಯಿಂದಲೇ ತಮ್ಮ ಅನುಭವಗಳನ್ನು ಅನುಭಾವ ಪಥಕ್ಕೇರಿಸಿ ಸಾಮಾಜಿಕ, ಧಾರ್ಮಿಕ ಪಾತಳಿಯಲ್ಲಿ ಹೊಸ ರಚನೆ ಗೈದದ್ದು ಮುಖ್ಯ.

*'ತನುವೆಂಬ ಮೋಹದಲ್ಲಿ ಮಾಯಾಗುಣವೆಂಬ ಮಾರಿಯ ಹಿಡಿದು*
*ರಾಜಸ ತಾಮಸವೆಂಬ ಬಾಳು ಬಟ್ಟಲು ಕೈಯಲ್ಲಿ*
*ಪ್ರಳಯ ಸಂಹಾರವೆಂಬ ಬಳೆಯ ಕೈಯಲ್ಲಿಕ್ಕಿ*
*ಲಿಂಗದ ಮನೆಯ ಬಾಗಿಲಲ್ಲಿ ಕೊಂದು ಬಂದರೇನ*
*ಬಲ್ಲವರಿಕ್ಕಿ ಅರಿಯದವರೆಲ್ಲರೂ ಸುಮ್ಮನಿರಿ*

*ಡಕ್ಕೆಯ ಉಲುಹಡಗುವುದಕ್ಕೆ ಮುನ್ನವೆ ನಿಶ್ಚೈಸಿ*
*ನಿಜತತ್ವವನರಿ ಕಾಲಾಂತರ ಭೀಮೇಶ್ವರ ಲಿಂಗವನರಿಯ ಬಲ್ಲಡೆ'*

ಇಲ್ಲಿ ಡಕ್ಕೆಯ ಬೊಮ್ಮಯ್ಯನು ತನ್ನ ಕುಲ ಕಸುಬಿನ ಬಗ್ಗೆ ಕೀಳೀಕರಣಕ್ಕೊಳಗಾಗದೆ ಅದನ್ನು ಆಧ್ಯಾತ್ಮಿಕ ಚೌಕಟ್ಟಿಗೆ ಒಳಪಡಿಸಿದ್ದು ಗಮನಾರ್ಹ, ತನ್ನ ಕಸುಬಿನ ಮೂಲಕವೇ ಬೆಳಕು ಕಾಣುವವರು, ಬಹುತೇಕ ಕೆಳವರ್ಗದ ವಚನಕಾರರು, ಮತ್ತು ಕೆಳವರ್ಗದ ವಚನಕಾರ್ತಿಯರು ತಮ್ಮ ಕುಲಕಸಬನ್ನೇ ಅನುಭಾವವನ್ನಾಗಿ ಮಾಡಿ, ಕಸಬುಗಳನ್ನು ಆಧ್ಯಾತ್ಮಿಕ ಸೋಪಾನಗಳನ್ನಾಗಿ ಮಾಡಿದ್ದು ಅವರ ವಚನಗಳ ಮೂಲಕ ಗುರುತಿಸಬಹುದು.

ಈ ಮೇಲಿನ ವಚನಗಳನ್ನೆಲ್ಲಾ ಗಮನಿಸಿದಾಗ ಕೆಳಸ್ತರದ ವಚನಕಾರರು ಪುನರ್ ಮೌಲ್ಯೀಕರಣಗೊಂಡ ಹೊಸ ಕಲ್ಪನೆಗಳ ಹುಟ್ಟಿಗೆ ಎದುರಾಗುತ್ತಲೇ ವೈಧಿಕ ಧರ್ಮದ ಜಡತೆಯನ್ನು ತೊಡೆದು ಹಾಕಲು ಸವಾಲೆಸೆದು, ಲಿಂಗಸಮಾನತೆ, ವರ್ಗಸಮಾನತೆಯಂಥ ಹೊಸ ಅಂಶಗಳನ್ನು ಮತ್ತು ಜಾತಿ-ಮತ ಮೀರಿದ ಧಾರ್ಮಿಕ ಸಂಘವನ್ನು ನಿರ್ಮಿಸುವಲ್ಲಿ ವಹಿಸಿದ ಪಾತ್ರ ಎದ್ದುಕಾಣುತ್ತದೆ.

*'ಸತಿ ಪುರುಷರಿಬ್ಬರಿಂದೊದಗಿದ ಸುಖ ಸತಿಗೋ, ಪುರುಷಂಗೊ?*
*ಇದನಾವಿವರಿಸಲಂಜುವೆ ಇನ್ನಾರಿಗೆ ಸುಖದುಃಖವೆಂಬೆ?*
*ಕೂಟಸ್ಥದಿಂದ ಹುಟ್ಟಿದ ಶಿಶು ಬೆಳೆಯಿತ್ತು ಹೆಂಗೂಸಿನ ಕೈಯಲ್ಲಿ*
*ಆ ಮಗು ಅವನಿಗೋ, ಅವಳಿಗೋ? ಬದುಕಿದಡೂ ಸುಖ ಇಬ್ಬರಿಗೂ ಸರಿ,*
*ಸತ್ತರೂ ದುಃಖ ಇಬ್ಬರಿಗೂ ಸರಿ, ಆ ಪುತ್ರನ ಇರವು*
*ಇದನ್ನಿನ್ನಾ ಹೇಳುವೆ, ನಿಃಕಳಂಕ ಮಲ್ಲಿಕಾರ್ಜುನಾ'*

ಎನ್ನುವ ಮೋಳಿಗೆ ಮಾರಯ್ಯ ಸುಖ ದುಃಖ ಸತಿ ಪುರುಷರಿಗೂ ಸರಿ ಎನ್ನುವ ಮೂಲಕ ಲಿಂಗ ಸಮಾನತೆಯನ್ನು ಎತ್ತಿತೋರಿಸುತ್ತಾನೆ 'ಸತಿ, ಪುರುಷರಿಬ್ಬರಿಂದೊದಗಿದ ಸುಖ ಸತಿಗೋ ಪುರುಷಂಗೋ ಎನ್ನುವ ಪ್ರಶ್ನೆ ಸತಿ-ಪುರುಷ ಸಮಾನತೆಯಲ್ಲಿ ಅಸಮಾನತೆಯು ಸಹಜವಾಗಿತ್ತೆಂಬುದಂತೂ ಸ್ಪಷ್ಟ. ಹೆಣ್ಣು ಗಂಡಿನ ಮಧ್ಯದ ಅಸಮಾನ ಮತ್ತು ಅಮಾನವೀಯತೆಗಳ ನೆಲೆಗಳನ್ನು ಪ್ರಶ್ನಿಸುತ್ತಾರೆ. ಹಾಗೆ ಪರ್ಯಾಯವನ್ನು ಸೂಚಿಸುತ್ತಾರೆ. ಮೇಲಿನ ವಚನವು ಭೇದ ಕಲ್ಪನೆಯಿಂದ ಅಭೇದ ಕಲ್ಪನೆಯತ್ತ ಕ್ರಿಯಾತ್ಮಕಗೊಳ್ಳುತ್ತದೆ. ಶ್ರಮಿಕ ವರ್ಗದ ವಚನಕಾರರಿಗೆ ವಾಸ್ತವ ಬದುಕು ಮುಖ್ಯ. ಅಲ್ಲಿಂದಲೇ ಅವರ ಆಧ್ಯಾತ್ಮಿಕ ವ್ಯಾಪಾರಗಳು ಸುರುವಾಗುತ್ತವೆ. ಹೀಗಾಗಿ ವಚನಕಾರರಲ್ಲಿ ಮೇಲ್ವರ್ಗದ ವಚನಕಾರರ ಆಧ್ಯಾತ್ಮಿಕ ಅನುಭವ ಒಂದು ರೀತಿಯದಾದರೆ ದುಡಿವ ವರ್ಗಗಳ ಆಧ್ಯಾತ್ಮಿಕ ಅನುಭವ ಇನ್ನೊಂದು ರೀತಿಯದ್ದಾಗಿರುತ್ತದೆ. ಒಂದು ರೂಪವನ್ನು ನಿರೂಪದೊಂದಿಗೆ ಸಾಧಿಸಿದರೆ ಇನ್ನೊಂದು ರೂಪ ನಿರೂಪದತ್ತ ಸ್ವರೂಪದ ಸ್ವರದಲ್ಲಿ ತನ್ನ ಆಧ್ಯಾತ್ಮಿಕ ವಿಚಾರಗಳನ್ನು ವಿವರಿಸುತ್ತದೆ. ಇಲ್ಲಿ

ದೇಹಮೂಲವಾದ ಕ್ರಿಯೆ ಮತ್ತು ಅರಿವು ಬಹುಪ್ರಧಾನವಾದದ್ದು. ಬಸವಣ್ಣ ಅಕ್ಕಮಹಾದೇವಿಯರಲ್ಲಿ ಒಮ್ಮೆಮ್ಮೆ ದೇಹ ಕೇಡಿನ ಸಂಕೇತವಾಗಿ ಹೇಯವಾಗಿ ಬರುತ್ತದೆ. ಆದರೆ ದುಡಿವ ವರ್ಗಗಳಲ್ಲಿ ದೇಹದ ಈ ಹೇಯತೆ ಕಾಣದೇ ಅದರ ರಚನಾತ್ಮಕ ಬಳಕೆ ಬಹುಪ್ರಾಮುಖ್ಯತೆ ಪಡೆಯುತ್ತದೆ.

**ಅಡಿ ಟಿಪ್ಪಣಿಗಳು**

೧. ಬರಗೂರ ರಾಮಚಂದ್ರಪ್ಪ (ಸಂ) ಪು-೨ **ವಚನಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ.**

೨. ಬರಗೂರ ರಾಮಚಂದ್ರಪ್ಪ (ಸಂ) ಪು-೩೨ **ವಚನ ಸಾಹಿತ್ಯದಲ್ಲಿ ಕೆಳವರ್ಗದ** ---,,---

೩. ----,,--- ಪುಟ-೮೬, ---,,---

೪. ರಹಮತ್ ತರೀಕೆರೆ ಪು-೧೬೭, **ಮರದೊಳಗಿನ ಕಿಚ್ಚು**

೫. ಕಲಬುರ್ಗಿ ಎಂ.ಎಂ.(ಸಂ) **ಸಮಗ್ರ ವಚನ ಸಂಪುಟ** -೬ ವ-೨೫೮ ಪು.೮೩

೬. ಮಲ್ಲಾಪುರ ಬಿ.ವ್ಹಿ(ಸಂ) **ಸಮಗ್ರ ವಚನ ಸಂಪುಟ** -೬ ಪು-೫೨ ವ-೧೫೦

೭. ಕಲಬುರ್ಗಿ ಎಂ.ಎಂ. (ಸಂ) **ಸಮಗ್ರ ವಚನ ಸಂಪುಟ** -೬ ಪು-೫೬ ವ-೧೬೮

೮. ಬರಗೂರ ರಾಮಚಂದ್ರಪ್ಪ (ಸಂ) ಪು-೭೮ **ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ**

೯. ಕಲಬುರ್ಗಿ ಎಂ.ಎಂ (ಸಂ) **ಸಮಗ್ರ ವಚನ ಸಂಪುಟ**-೧ ಪು-೨೧೧ ವ-೮೨೧

೧೦. ಮಲ್ಲಾಪುರ ಬಿ.ವ್ಹಿ (ಸಂ) **ಸಮಗ್ರ ವಚನ ಸಂಪುಟ**-೩ ಪು-೨೫೬ ವ-೧೦೬೨

೧೧. --,,-- **ಸಂಪುಟ**-೨ ಪು-೬೨ ವ-೧೯೫

೧೨. ಬಸವರಾಜ ಕಲ್ಗುಡಿ ಪು-೨೫೮ ಅನುಭಾವ; **ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ.**

೧೩. ಶಿವರುದ್ರಪ್ಪ ಜಿ.ಎಸ್. ಪು-೧೩ **ವಿಸ್ತರಣ**

೧೪. ಕಲಬುರ್ಗಿ ಎಂ.ಎಂ.(ಸಂ) **ಸಮಗ್ರ ವಚನ ಸಂಪುಟ**-೬ ಪು-೮ ವ-೧೭

೧೫. ವಿದ್ಯಾಶಂಕರ ಎಸ್.(ಸಂ) **ಸಮಗ್ರ ವಚನ ಸಂಪುಟ** - ೭ ಪು-೧೪೫ ವ-೪೦೯

೧೬. ಕಲಬುರ್ಗಿ ಎಂ.ಎಂ.(ಸಂ) **ಸಮಗ್ರ ವಚನ ಸಂಪುಟ**-೬ ಪು-೪೦ ವ-೧೨೧

೧೭. ಬರಗೂರ ರಾಮಚಂದ್ರಪ್ಪ (ಸಂ) ಪು-೭೮, **ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ**

೧೮. ಮಲ್ಲಾಪುರ ಬಿ.ವ್ಹಿ(ಸಂ) **ಸಮಗ್ರ ವಚನ ಸಂಪುಟ** -೩

೧೯. ಕಲಬುರ್ಗಿ.ಎಂ.ಎಂ (ಸಂ) **ಸಮಗ್ರ ವಚನ ಸಂಪುಟ**-೬ ಪು-೧೧೭ ವ-೩೯

೨೦. ಕಲಬುರ್ಗಿ. ----,,-- ಸಂಪುಟ-೫ ಪು-೨೦೬ ವ-೬೫೨

೨೧.---,,--- ಸಂಪುಟ-೧ ಪು-೮೩ ವ-೩೪೬

೨೨. ---,,----- ಪುಟ-೧೫೮ ವ-೬೨೮

೨೩. ರಹಮತ್ ತರಿಕೇರಿ, ಪು-೧೫ ಮರದೊಳಗಿನ ಕಿಚ್ಚು

೨೪. ವಿದ್ಯಾಶಂಕರ .ಎಸ್ (ಸಂ) ಸಮಗ್ರ ವಚನ ಸಂಪುಟ-೭ ಪು-೨೯೪ ವ-೯೩೬

೨೫. ಹಿರೇಮಠ ಬಿ.ಆರ್ (ಸಂ) ಸಮಗ್ರ ವಚನ ಸಂಪುಟ-೮ ಪು-೭೨೦ ವ-೨೧೫೨

# ಅಧ್ಯಾಯ ೩

# ಅಲಕ್ಷಿತ ವಚನಕಾರ್ತಿಯರ ಒಲವು-ನಿಲುವುಗಳು

## ೩.೧. ಜ್ಞಾನ-ಭಕ್ತಿ

ವೈದಿಕ ಪ್ರಭುತ್ವವನ್ನು ಅತಿ ಕಟುವಾಗಿ ವಿರೋಧಿಸಿ ವರ್ಣವ್ಯವಸ್ಥೆಯ ಶ್ರೇಣೀಕರಣವನ್ನು ಮುರಿದು ಸಮಾನ ವ್ಯಕ್ತಿತ್ವದ ಆಧಾರದ ಮೇಲೆ ಧಾರ್ಮಿಕ ಪಂಥವೊಂದನ್ನು ನಿರ್ಮಾಣ ಮಾಡುವ ಕೆಲಸ ಹನ್ನೆರಡನೇ ಶತಮಾನದಲ್ಲಿ ನಡೆಯಿತು. ಹಿಂದೂ ಧರ್ಮದ ರಚನಾ ಸ್ವರೂಪವನ್ನೇ ಪ್ರಶ್ನಿಸಿದ ವಚನಕಾರರು ಸಂಪ್ರದಾಯ, ಕಂದಾಚಾರ, ರೂಢಿ, ಕಟ್ಟಳೆಗಳ ಬದಲಾಗಿ ಸಮಾನತೆ, ಸ್ವಾತಂತ್ರ್ಯ, ಮುಕ್ತತೆಯಂತ ಹೊಸ ಸಾಮಾಜಿಕ ಸ್ವರೂಪಗಳು ಆವಿಷ್ಕಾರಗೊಳ್ಳುವಂತೆ ಮಾಡಿದರು.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಹನ್ನೆರಡನೆ ಶತಮಾನವು ಭಕ್ತಿ-ಅಭಿವ್ಯಕ್ತಿಗಳಲ್ಲಿ ಬಹುಮುಖ್ಯ ಪಾತ್ರವಹಿಸಿತು. ಉಪನಿಷತ್ ಕಾಲದಿಂದಲೂ ಭಕ್ತಿಯ ಹೆಸರಿನಲ್ಲಿ ನಡೆಯುವ ಕುಕೃತ್ಯಗಳಿಗೆ ಕಡಿವಾಣಹಾಕಿ ಸಂಕೀರ್ಣಗೊಂಡ ಭಕ್ತಿಮಾರ್ಗವನ್ನು ಈ ವಚನ ಚಳುವಳಿ ಸರಳಗೊಳಿಸಿತು. ಜ್ಞಾನ ಭಕ್ತಿ ಇವುಗಳಿಗೆ ಯಾವ ಜಾತಿ ಸೂಚಕಗಳಿಲ್ಲ, ಹುಟ್ಟಿನಿಂದ ಯಾವ ಜಾತಿಯವನಾದರೂ ಅಂಗದಲ್ಲಿ ಲಿಂಗಧರಿಸಿದರೆ ಆತನೆ ಜಂಗಮ. ಜ್ಞಾನ ಎಂದಾಕ್ಷಣ ಪುರೋಹಿತಶಾಹಿಗಳಿಗೆ ಮೀಸಲು, ಭಕ್ತಿ ಎಂದಾಕ್ಷಣ ಮಡಿ ಮೈಲಿಗೆಯ ಭಾವನೆ ಅಲ್ಲ, 'ಭಕ್ತಿ ಎಂಬುದು ಒಂದು ಅನುಭವ', ದೇವರ

ಅನುಭವ' ಈ ಅನುಭವವನ್ನು ಜನಸಾಮಾನ್ಯರೆಲ್ಲ ಪಡೆಯಬಹುದೆಂಬ ಸಾರ್ವತ್ರಿಕತೆಯನ್ನು ಈ ಚಳುವಳಿ ಸಾರಿತು. ಭಕ್ತಿ ಎಂದರೆ ಕೇವಲ ಭಾವಾವೇಶವೆಂದಾಗಲಿ, ಶ್ರದ್ಧೆಯಿಂದ ಶರಣಾಗತವಾಗುವುದು ಎಂದಾಗಲಿ ಅಷ್ಟೇ ಅಲ್ಲ. ಅದು ಲೌಕಿಕ ಅಧೀನತೆಗಳನ್ನು ನಿರಾಕರಿಸುವುದು ಮತ್ತು ಸಾಮಾಜಿಕವಾಗಿ ಸಮಾನತೆಯನ್ನು ಎತ್ತಿ ಹಿಡಿಯುವುದಾಗಿದೆ. ಅಲ್ಲದೆ ಅಂತರಂಗ-ಬಹಿರಂಗ ಶುಚಿತ್ವಕ್ಕೆ ಪರಿಶುದ್ಧತೆಗೆ ಈ ಭಕ್ತಿ ದಾರಿಯಾಗಿತ್ತು, 'ಭಕ್ತಿ ಎನ್ನುವುದು ಭಕ್ತ ಹಾಗೂ ಭಗವಂತ ಇವರ ನಡುವೆ ಇರುವ ಆತ್ಮೀಯ ಹಾಗೂ ವ್ಯಕ್ತಿ ನಿಷ್ಠ ಅನುಸಂಧಾನ ಎನ್ನುವ ಭಾವನೆಯನ್ನು ಪ್ರತಿಪಾದಿಸುತ್ತದೆ.[೨] ಹಾಗೆಯೇ 'ಮೂಲತಃ ಭಕ್ತಿ ಎನ್ನುವುದು ಯಾವುದೇ ಧಾರ್ಮಿಕ ತತ್ವಕ್ಕೆ ಬದ್ಧವಾದದ್ದಲ್ಲ ಮತ್ತು ಏಕಮುಖವೂ ಅಲ್ಲ, ಅದು ಬಂಧ ಮುಕ್ತವಾದದ್ದು, ಭಕ್ತ ಮತ್ತು ಭಗವಂತರ ಕೂಡು ಕೊಳ್ಳುವಿಕೆಯ ರೂಪದ್ದು'[೩] ಎಂಬುದು ಅಷ್ಟೇ ಸತ್ಯವಾದುದು.

ದೇವರು ಕುರಿತ ಹಾಗೆ ಇರುವ ನಿಷ್ಠುರ ನಿಯಮಗಳು, ಕಠಿಣ ಆಚರಣೆಗಳ ಬದಲಾಗಿ ಮಾನವೀಯ ಸಂಬಂಧಗಳು ಏರ್ಪಡುವಂತೆ ಮಾಡಿದರು, ಪೂಜೆ ಎನ್ನುವುದು ಜಡವಾದ ಯಾಂತ್ರಿಕ ಕ್ರಿಯೆಯಾಗದೆ ನಿತ್ಯನೂತನ ಅನುಭವಗಳನ್ನು ಕೊಡುವ ಜೀವಂತ ಕ್ರಿಯೆ ಆಯಿತು. ವಚನಕಾರ್ತಿಯರ ಈ ಭಕ್ತಿ ಮಾರ್ಗ 'ಈ ಲೋಕದಲ್ಲಿ ಇದ್ದುಕೊಂಡೇ ಸಾಧಿಸಬೇಕಾಗಿರುವ ಶ್ರೇಷ್ಠತಮ ಬದುಕಿನ ರೀತಿಗಾಗಿಯೇ ಹೊರತು, ಪರಲೋಕವೆಂಬ ಒಂದು ಅಮೂರ್ತ ಲೋಕದ ಮುಕ್ತಿ ಪ್ರಾಪ್ತಿಗಾಗಿ ಅಲ್ಲ'[೪] ಎಂಬಂಶವನ್ನು ಸಾಬೀತುಪಡಿಸಿದರು. ಕೆಳಸ್ತರದ ನೋವು, ಅಪಮಾನ, ಅನಾಧರಣೆಗೊಳಗಾಗಿದ್ದ ವಚನಕಾರ್ತಿಯರಾದ ಕಾಳವ್ವೆ, ಸೂಳೆಸಂಕವ್ವೆ, ರೆಮ್ಮವ್ವೆ, ರೇಚವ್ವೆ, ಸತ್ಯಕ್ಕ, ಸೋಮವ್ವೆ, ಕಾಮಮ್ಮ, ಗಂಗಮ್ಮ ಮುಂತಾದ ಮಹಿಳೆಯರ 'ಭಕ್ತಿಯ ಮಾರ್ಗಬೇರೆ, ಜ್ಞಾನದ ಮಾರ್ಗ ಬೇರೆ ಆದರೆ ಎರಡರ ಗುರಿ ಒಂದೇ, ಭಕ್ತಿ ಭಾವುಕ ಜನರಿಗೆ ಸುಸಾಧ್ಯ ಆದರೆ ಜ್ಞಾನದ ಹಾದಿ ಅವಕಾಶವಿರುವ ಪುರುಷನೊಬ್ಬನೆ ಸಾಧಿಸುವುದಲ್ಲ' ಸ್ತ್ರೀಯೂ ಆ ರೀತಿಯ ವ್ಯಕ್ತಿತ್ವ ಪಡೆದು ಲೌಕಿಕದಲ್ಲಿದ್ದುಕೊಂಡೆ ಅರ್ಥಪೂರ್ಣ ಮತ್ತು ಕ್ರಿಯಾತ್ಮಕ ಬದುಕನ್ನು ನಡೆಸಿ ಜ್ಞಾನ-ಭಕ್ತಿಗೆ ಹೊಸ ಅರ್ಥವನ್ನು ಕಲ್ಪಿಸಿಕೊಟ್ಟರು.

ಸಮಾಜ ಮುಖಿಯಾದ ಇವರ ವಚನಗಳು ತಮ್ಮ ಸುತ್ತ ಮುತ್ತಲಿನ ಸಮಸ್ಯೆಗಳಿಗೆ ತೀವ್ರವಾಗಿ ಸ್ಪಂದಿಸಿದವು. 'ಮಾತಿನಲ್ಲಿ ಮಹಾಜ್ಞಾನಿಗಳೆಂದು ವೇಷಧಾರಿಗಳ ಕಂಡು ನಾಚುವೆ' ಎನ್ನುವಲ್ಲಿ ಮಹಾಜ್ಞಾನಿಗಳಂತೆ ವೇಷಹಾಕಿಕೊಂಡು ಡಂಭಾಚಾರಿಗಳಂತೆ ತಿರುಗುವವರನ್ನು ತರಾಟೆಗೆಳೆದಿರುವುದು

ಮುಖ್ಯ. ಅಷ್ಟೇ ಅಲ್ಲದೆ ಜ್ಞಾನ, ಭಕ್ತಿ, ವೈರಾಗ್ಯವಿಲ್ಲದ ಇರುವಿಕೆಯನ್ನು ಪ್ರಶ್ನಿಸಿದ್ದುಂಟು. ಜ್ಞಾನಿಯಾದವನು ತಾನು ಜ್ಞಾನಿ ಎಂದು ಎಲ್ಲರಿಗೂ ಹೇಳಬೇಕಾಗಿಲ್ಲ, ಭಕ್ತಿ ತೋರಿಕೆಗಲ್ಲ, ಅದು ತನ್ನೊಳಗೆ ಆಚರಿಸತಕ್ಕದ್ದು ಎಂಬ ವಾಣಿಗಳಿಂದ ಆಚರಣೆಯಲ್ಲಿರುವ ವೈಪರಿತ್ಯಗಳನ್ನು ಇವರು ತಿರಸ್ಕರಿಸಿದರು. ಇದರಿಂದ ಜ್ಞಾನ-ಭಕ್ತಿ ಪದಗಳಿಗೆ ಹೊಸ ಪರಿಕಲ್ಪನೆ ಮೂಡಲು ಅನುಕೂಲವಾಯಿತು. ಭಕ್ತಿ ದೈವಕ್ಕೆ ಸಂಬಂಧಿಸಿದ ಪ್ರಕ್ರಿಯೆ ಮಾತ್ರವಲ್ಲ, ತನ್ನನ್ನು ತಾನು ಗುರುತಿಸಿಕೊಳ್ಳುವುದು. ವೈಯಕ್ತಿಕ ಈರ್ಷ್ಯೆ, ದ್ವೇಷ ನಿಂದನೆಗೆ ಬದಲಾಗಿ ಜ್ಞಾನ-ಭಕ್ತಿಯ ಆಳದಲ್ಲಿ ತಮ್ಮನ್ನು ತಾವು ತಿದ್ದಿಕೊಂಡು ಇತರರನ್ನು ತಿದ್ದುವ ಉದ್ದೇಶ ಈ ಶರಣೆಯರದಾಗಿತ್ತು.

ವ್ಯಕ್ತಿ ಜೀವನದ ಔನತ್ಯಕ್ಕೆ 'ಆಧ್ಯಾತ್ಮ' ಮುಖ್ಯ. ಈ ಆಧ್ಯಾತ್ಮ ಎನ್ನುವುದು ಸಂಸಾರಕ್ಕೆ ವಿರೋಧವಾದುದಲ್ಲ. ಸನ್ಯಾಸವೆಂದರೆ ವಾಸ್ತವ ಬದುಕಿನಿಂದ ದೂರಸರಿದು ಕಾಡು-ಮೇಡುಗಳಿಗೆ ಹೋಗುವ ವಿಧಾನವಲ್ಲ, ಈ ಜಗತ್ತು ಮಿಥ್ಯವಲ್ಲ, ಸತ್ಯ ಎಂಬಂಶವನ್ನು ಮನದಟ್ಟುಪಡಿಸಿದರು. ದೇವರನ್ನು ಭಕ್ತಿಯನ್ನು ಒಪ್ಪಿಕೊಂಡ ಶರಣ. ಶರಣೆಯರು ದೇವಸ್ಥಾನವನ್ನು ನಿರಾಕರಿಸಿದರು ಏಕೆ? ಬಹಶಃ ದೇವರು ದೇವಸ್ಥಾನದ ಹೆಸರಿನಲ್ಲಿ ಜಡ ಅಸಮಾನತೆಗಳನ್ನು ತಳೆದು ಜಾತಿ, ವರ್ಗ, ಲಿಂಗ-ಭೇದಗಳಂತಹ ವಿಚಿದ್ರಕಾರಕ ಶಕ್ತಿಗಳು ಕೆಳವರ್ಗದವರನ್ನು ಕಡೆಗಣಿಸಿರಲಿಕ್ಕೆ ಸಾಕು. ಅಂದಿಣ ಸಮಾಜದ ನಿಂದೆ ಕುಹಕ ಕಟು ಟೀಕೆಗೆ ಗುರಿಯಾದ ಶರಣೆಯರು ದೇವರನ್ನು ಸಂಸಾರದಲ್ಲಿದ್ದುಕೊಂಡೆ ಕಾಣುವ ವೈಚಾರಿಕ ನಿಲುವನ್ನು ಕಂಡುಕೊಂಡು ಭಕ್ತಿಗೆ ಚಲನಶೀಲ ಸ್ವರೂಪವನ್ನು ತಂದುಕೊಟ್ಟರು.

*'ಸತ್ಯವಿಲ್ಲದ ಭಕ್ತಿ ಹತ್ತು ಸಾವಿರಕಾಲ ಮಾಡಿದರೇನು?*
*ನಿಷ್ಠೆಯಿಲ್ಲದ ಪೂಜೆಯನೇಸು ಕಾಲ ಮಾಡಿದರೇನು?*
*ಭಾವ ನೆಲೆಗೊಳ್ಳದನ್ನಕ್ಕರ'*[1]

ಎನ್ನುವ ಈ ವಚನ ಸತ್ಯವನ್ನೇ ಭಕ್ತಿ ಎಂದು ಸಾರಿದೆ. ವಚನಕಾರ್ತಿಯರು ಹೆಚ್ಚಾಗಿ ಪಾಂಡಿತ್ಯಕ್ಕಿಂತ ಪ್ರಮಾಣಿಕತೆಗೆ ಹೆಚ್ಚಿನ ಮನ್ನಣೆ ನೀಡಿದ್ದನ್ನು ಮನಗಾಣುತ್ತೇವೆ. ಇಲ್ಲಿ ಸತ್ಯ ಮತ್ತು ನಿಷ್ಠೆ ಮುಖ್ಯ. ಎಷ್ಟೋ ವಚನಕಾರರು ವಚನಕಾರ್ತಿಯರ ಭಕ್ತಿ ಮಾರ್ಗವನ್ನು ಅನುಸರಿಸಿದ್ದನ್ನು ಕಾಣಬಹುದು.

*'ಎನ್ನ ಭಕ್ತಿಗೆ ನೀ ಶಕ್ತಿಯಾದ ಕಾರಣ*
*ಎನ್ನ ಸತ್ಯಕ್ಕೆ ನೀ ಸತಿಯಾದ ಕಾರಣ*
*ಎನ್ನ ಸುಖ-ದುಃಖ ನಿನ್ನ ಸುಖ-ದುಃಖ ಅನ್ಯವಲ್ಲ*
*ಇದಕ್ಕೆ ಭಿನ್ನವೇನು ಹೇಳಾನಿಃಕಳಂಕ ಮಲ್ಲಿಕಾರ್ಜುನ'*[2]

ಈ ವಚನದಲ್ಲಿ ಮೋಳಿಗೆ ಕಾಯಕದ ಮಾರಯ್ಯ ತನ್ನ ಸತಿಯ ಮಹತ್ವವನ್ನರಿತು ಮುಕ್ತ ಕಂಠದಿಂದ ಹೊಗಳುತ್ತಾನೆ. ನಾನು ಸತ್ವಗೆಟ್ಟಾಗ ನನ್ನನ್ನು ಹಿಡಿದು ನಿಲ್ಲಿಸುವವಳು ನೀನು, ನೀನು ನಿಜವಾದ ಪತಿಪರಾಯಣೆ, ನನ್ನ ಭಕ್ತಿಗೆ ನೀನೆ ಶಕ್ತಿ. ಎನ್ನ ಸತ್ಯಕ್ಕೆ ನೀನೆ ಸತಿ ಎಂದು ತನ್ನ ಸಾಧನೆಯಲ್ಲಿ ಹೆಂಡತಿಯ ಮಹತ್ವ ಮನಗಾಣುತ್ತಾನೆ. ಇಲ್ಲಿ ಮೋಳಿಗೆ ಮಾರಯ್ಯ ಪಾರಮಾರ್ಥಿಕ ಹಾದಿಯನ್ನು ತನ್ನ ಸತಿಯಿಂದಲೇ ಕಂಡದ್ದನ್ನು ಒಪ್ಪಿಕೊಂಡಿರುವುದು ಮುಖ್ಯ.

'ಜ್ಞಾನ ಕ್ರಿಯೆಯಿಲ್ಲದೆ ಅರಿಯ ಬಹುದೆ' ಎನ್ನುವಲ್ಲಿ ಮುಕ್ತಾಯಕ್ಕ ಕ್ರಿಯೆಯ ಮೂಲಕ ಅರಿವನ್ನು ಪಡೆಯುವದನ್ನು ಅಂದರೆ ಜ್ಞಾನಕ್ಕೆ ಕ್ರಿಯೆಯೇ ಪ್ರಧಾನ ಎಂಬಂಶ ವ್ಯಕ್ತವಾಗುವುದು. 'ಕ್ರಿಯೆ ಮರೆದಲ್ಲಿ ಅರಿವು ಹೀನವಾಗಿಪುದು. ಕ್ರಿಯೆ ಮತ್ತು ಅರಿವು ಅಂದರೆ ಶ್ರಮ ಮತ್ತು ಜ್ಞಾನ, ಇವು ಒಂಕ್ಕೊಂದು ಹೊಂದಿ ನಡೆದಾಗ ಅದು ಆರೋಗ್ಯ ಪೂರ್ಣ ಬದುಕು ಕ್ರಿಯೆಯನ್ನು ಮರೆತ ಅರಿವು ಅಂದರೆ ಶ್ರಮವನ್ನು ಗೌರವಿಸದ ಶ್ರಮದೊಳಗೆ ಒಂದಾದ ಜ್ಞಾನ ಅದು ಹೀನವಾದದ್ದು, 'ಅಂತರಂಗದಲ್ಲಿ ಅರಿವಾದಡೆನೋ ಬಹಿರಂಗದಲ್ಲಿ ಕ್ರಿಯೆಯಿಲ್ಲದನ್ನಕ್ಕ ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ, ಜ್ಞಾನವೆಂದರೆ ತಿಳಿಯುವುದು, ಕ್ರಿಯೆ ಎಂದರೆ ತಿಳಿದಂತೆ ಮಾಡುವುದು"[೭] ಚೆನ್ನಬಸವಣ್ಣನವರ ವಚನದ ಅರ್ಥವು ಇದೆ ಅಗಿದೆ.

*'ಬತ್ತಲೆಯಿದ್ದವರೆಲ್ಲ ಕತ್ತೆಯ ಮರಿಗಳು*
*ತಲೆ ಬೋಳಾದವರೆಲ್ಲ ಮುಂಡೆಯ ಮಕ್ಕಳು*
*ತಲೆ ಜಡೆಗಟ್ಟಿದವರೆಲ್ಲ ಹೊಲೆಯರ ಸಂತಾನ*
*ಆವ ಪ್ರಕಾರವಾದಡೇನು ಅರಿವೇ ಮುಖ್ಯವಯ್ಯ'*[೮]

ಎನ್ನುವ ಅಕ್ಕಮ್ಮನ ವಚನದಲ್ಲಿ ನಾವು ಹಾಕುವ ವೇಷದಿಂದ ಜ್ಞಾನಿಗಳಾಗಲು ಸಾಧ್ಯವಿಲ್ಲ, ಇಲ್ಲಿ ಅರಿವೇ ಮುಖ್ಯ.

*'ಅರಿವು ನಷ್ಟವಾದವ ಕ್ರಿಯೆ ಬಲ್ಲನೆ*
*ಕ್ರಿಯೆಯೆಂಬುದೆ ಹಸು ಅರಿವೆಯೆಂಬುದೆ ಹಾಲು*
*ಬಯಕೆಯೆಂಬುದೆ ಕರು'*[೯]

ಎನ್ನುವ ಅರಿವಿನ ಮಾರಿತಂದೆಯ ಈ ವಚನದಲ್ಲಿ ಶ್ರಮ ಜೀವನಕ್ಕೆ ಅಧಾರ ಶಕ್ತಿ. ಅರಿವು ಜೀವ ಪೋಷಕಫಲ. ಶ್ರಮ ಮರೆತ ಜ್ಞಾನ ಹೀನವಾದುದು. ಇಲ್ಲಿ ಶ್ರಮ ಮರೆತ ಜ್ಞಾನ ಹೀನ, ಕ್ರಿಯೆಯಿಲ್ಲದೆ ಜ್ಞಾನ ಉದಯಿಸಲು ಸಾಧ್ಯವಿಲ್ಲ.

ಬಹುಮುಖಿ ಸಂವೇದನೆವುಳ್ಳ ಈ ಶರಣರ ಕ್ರಾಂತಿ ವಿಘಟನೆಗೊಂಡ ಬದುಕನ್ನು ಹಾಗೂ ಮನಸ್ಥಿತಿಯನ್ನು ಒಂದು ಸಂಘಟನೆಯ ಕೇಂದ್ರಕ್ಕೆ ತರುವ ಪ್ರಯತ್ನದಲ್ಲಿ ಬಹುದೇವೋಪಾಸನೆಯನ್ನು ನಿರಾಕರಿಸಿತಲ್ಲದೆ ಆಧ್ಯಾತ್ಮಿಕವಾಗಿ ಸಮಾನರು ಎಂಬ ಧರ್ಮ ಶ್ರದ್ಧೆ ಆತ್ಮಪ್ರತ್ಯಯವನ್ನು ಮೂಡಿಸಿತು. ಅರಿವು ಆಚರಣೆಗಳಲ್ಲಿ ಸಮನ್ವಯ ಸಾಧಿಸಿದರು. ಅರಿವು ಸಾರ್ಥಕಗೊಳ್ಳುವುದು ಆಚರಣೆಗೆ ಬಂದಾಗ ಮಾತ್ರ ಸಾಧ್ಯ, ಆಚರಣೆಗೆ ಬಾರದ ಅರಿವು 'ಹೊಟ್ಟೆಯ ಮೇಲೆ ಕಟ್ಟೋರಗವ ಕಟ್ಟಿದಂತೆ ವ್ಯರ್ಥ' ಎಂಬ ನಿಲುವನ್ನು ವ್ಯಕ್ತಪಡಿಸಿದರು.

*'ಜ್ಞಾನವೆಂಬುದು ಬೀದಿಯ ಪಸರವೇ?*
*ಬೊಕ್ಕಣಕ್ಕೆ ತುಂಬುವ ಹುರುಳಿಯೆ?*
*ಚೀಲದೊಳಗಣ ಜೀರಿಗೆಯೆ?*
*ಜ್ಞಾನ ಎಂಬುದು ಎಲ್ಲರೊಡನೆ ಬಿರದಿರಬೇಕು*
*ಗೆಲ್ಲ ಸೋಲಿನ ಮಾತು ಬಂದಡೆ ಗೆಲ್ಲವ ನುಡಿಯದಿರಬೇಕು*
*ಅಮುಗೇಶ್ವರ ಲಿಂಗವೆಂಬೆನು'*[೨೦]

ಇಲ್ಲಿ ರಾಯಮ್ಮ ಜ್ಞಾನವನ್ನು ಅತ್ಮಜ್ಞಾನದ ಅರ್ಥದಲ್ಲಿ ಬಳಸುತ್ತಾಳೆ. ಜ್ಞಾನ ಮಾರಟಕಿಟ್ಟ ವಸ್ತುವಲ್ಲ. ಅದು ತುಂಬ ಸರಳ ಸುಲಭವಾದುದಲ್ಲ, ಜ್ಞಾನದ ತಳಹದಿಯ ಮೇಲೆ ಭಕ್ತಿಯಿದೆ. ಇಲ್ಲಿ ಭಯಕ್ಕೆ ಅವಕಾಶವೇ ಇಲ್ಲ, ಜ್ಞಾನ ಎನ್ನುವದು ತನ್ನನ್ನು ತಾನು ಅರಿತು ನಡೆಯುವಂತ ಹದ್ದು ಎಂದು ಜ್ಞಾನದ ಮಹತ್ವವನ್ನು ಎತ್ತಿ ತೋರಿಸಿದಳು.

ಶರಣರು ಬಹುಮುಖ್ಯವಾಗಿ ಜ್ಞಾನವನ್ನು ಕ್ರಿಯಾಮೂಲವಾಗಿ ಗ್ರಹಿಸಿದವರು ಮತ್ತು ಆಚರಿಸಿದವರು. ಔಪಚಾರಿಕವಾದ ನಿಯಮ ಬದ್ಧವಾದ ತಿಳುವಳಿಕೆಗಿಂತ ಅನೌಪಚಾರಿಕ ಹಾಗೂ ಆತ್ಮಾಭಿಮಾನದ ತಳಹದಿಯನ್ನಾಗಿ ಅವರು ಜ್ಞಾನವನ್ನು ಸ್ವೀಕರಿಸಿದರು. ಶರಣರಲ್ಲಿ ಜ್ಞಾನದ ಸಿದ್ಧಾಂತಗಳಿಗಿಂತ (ಥೇರಿ) ಅವರ ಪ್ರಾಯೋಗಿಕ ಅಂಶಗಳಿಗೆ ಮೊದಲ ಆಧ್ಯತೆ. ಇಂಥ ಕ್ರಿಯೆ ಮತ್ತು ಅರಿವು ಪ್ರಧಾನವಾದ ತಿಳುವಳಿಕೆಯನ್ನು ಶ್ರದ್ಧಾಮೂಲವಾಗಿ ಅವರು ದುಡಿಸಿಕೊಂಡುರು. ಅದನ್ನೇ ಬೇಕಾದರೆ ಭಕ್ತಿಯೆಂದು ಕರೆಯಬಹುದು. ಜ್ಞಾನದ ಕೇಂದ್ರೀಕರಣ ಪ್ರವೃತ್ತಿಗಿಂತ ಅದರ ವಿಕೇಂದ್ರಿಕರಣಕ್ಕೆ ಹೆಚ್ಚು ಒತ್ತು ಕೊಟ್ಟದ್ದನ್ನು ಕೆಳವರ್ಗದ ವಚನಕಾರ್ತಿಯರ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

ವಿಶೇಷವಾಗಿ ಜ್ಞಾನದ ವ್ಯಾಖ್ಯಾಯನ್ನೇ ಈ ವಚನಕಾರ್ತಿಯರು ಮರು ವಿಮರ್ಶೆ ಮಾಡಿದ್ದು ಬಹು ಮುಖ್ಯವಾದ ಸಂಗತಿ. ಜ್ಞಾನವನ್ನು ಪುರುಷರಿಗೆ ನಿರ್ಧಿಷ್ಟಗೊಳಿಸಿದ ಕಾಲದಲ್ಲಿ ಈ ವಚನಕಾರ್ತಿಯರು ಪ್ರತಿಭಟಿಸಿ ಜ್ಞಾನಕ್ಕಿದ್ದ ಲಿಂಗಭೇದ ಪ್ರವೃತ್ತಿಯನ್ನು ತೊಡೆದು ಹಾಕಿದರು. ಜ್ಞಾನವನ್ನು ಆಧ್ಯಾತ್ಮಿಕಾನುಭವದಲ್ಲಿ ಕ್ರಿಯೆ ಮತ್ತು ಅರಿವಿನ ಮೂಲವಾಗಿ ಸಾಕಾರಗೊಳಿಸಿದರು.

## ೩.೨. ಶರಣಸತಿ - ಲಿಂಗಪತಿ ತತ್ವ

ಸ್ತ್ರೀ ಸಂವೇದನಾ ದೃಷ್ಟಿಯಿಂದ ಹನ್ನೆರಡನೇ ಶತಮಾನದ ಅಮೂಲ್ಯ ಕೊಡುಗೆ ಎಂದರೆ ಈ ಶರಣಸತಿ-ಲಿಂಗಪತಿ ಪರಿಕಲ್ಪನೆ. ಈ ಕಲ್ಪನೆಯು ಕ್ರೌರ್ಯದ ಬದುಕಿನಲ್ಲೂ ಪ್ರೇಮವು ಮಾನವೀಯವಾಗಿಯೇ ಬದುಕಲು ಕಾರಣವಾಗುತ್ತದೆ ಎಂಬ ನಂಬಿಕೆಯನ್ನು ಪ್ರಕಟಿಸುತ್ತದೆ. ನವ ವಿಧವಾದ ಭಕ್ತಿಗಳಲ್ಲಿ ಒಂದಾದದ್ದು ಮಧುರ ಬಂಧ. ಇಲ್ಲಿ ದೈವವನ್ನು ಪುರುಷನೆಂದು ಭಾವಿಸಿ ಭಕ್ತನು ತನ್ನನ್ನು ದೇವರ ಪತ್ನಿ ಎಂದು ಭಾವಿಸುವುದು. ಇಡೀ ಸೃಷ್ಟಿಯೇ ಹೆಣ್ಣೆಂದು ಇದನ್ನು ಸೃಷ್ಟಿಸಿದ ಕರ್ತೃ ಗಂಡೆಂದು ಪರಿಭಾವಿಸುವ ಪರಿಪಾಠ ಭಾರತೀಯರ ಪರಂಪರೆಯಲ್ಲಿ ಮೊದಲಿನಿಂದಲೂ ಬಂದಿದೆ. ಪ್ರಕೃತಿಯ ಒಂದು ಭಾಗವಾದ ಮಾನವನು ಹೆಣ್ಣೆಂದೇ ಪರಿಭಾವಿಸುವುದು, ಪತಿವ್ರತೆಯಾದವಳು ಪತಿಸೇವೆಯೇ ಪರಮಾರಾಧನೆಯೆಂದು ಭಾವಿಸುವ ಹಾಗೇ ಭಕ್ತನಾದವನು ದೈವವನ್ನು ಉಪಾಸಿಸುವುದೇ ಮಧುರ ಭಾವ, ಇದೇ ಶರಣಸತಿ ಲಿಂಗಪತಿ ಭಾವ

ಈ 'ಶರಣಸತಿ - ಲಿಂಗಪತಿ ಭಾವ' ಅನುಭಾವಿಗಳ ಅತಿ ವಿಶೇಷವಾದ ಭಾವ, ಲಿಂಗಾಧಾರಿತ ಸಮಾಜದಲ್ಲಿ ಸಮಾನತ್ವ ತರುವಲ್ಲಿ ಪುರುಷ ದುರಭಿಮಾನ ಹಾಗೂ ಸ್ತ್ರೀಕೀಳರಿಮೆಯ ನಷ್ಟ ಕ್ರಿಯೆಗೆ ಈ ಪರಿಕಲ್ಪನೆ ದಾರಿ ಮಾಡಿಕೊಟ್ಟಿತು. ಹೆಣ್ಣು ಅಪವಿತ್ರಳು, ವಿದ್ರೋಹದ ಪ್ರತೀಕ, ಚಂಚಲೆ, ಕಾಮುಕಿ, ಎನ್ನುವಂತಹ ಅವಮಾನಕರ ಪರಿಸ್ಥಿತಿಯಲ್ಲಿ ಹೆಣ್ತನವನ್ನು ವಚನಕಾರರು ತಮ್ಮ ಮೇಲೆ ಹೇರಿಕೊಂಡಿದ್ದು ಸಾಮಾನ್ಯವೇನಲ್ಲ.

ಬಸವಣ್ಣ, ಅಲ್ಲಮ, ಉರಿಲಿಂಗದೇವ, ಗಜೇಸ ಮಸಸಣಯ್ಯ, ಅಕ್ಕಮಹಾದೇವಿಯರ ಭಕ್ತಿಯಲ್ಲಿ ಈ ಶರಣಸತಿ-ಲಿಂಗಪತಿ ಭಾವವನ್ನು ಮುಖ್ಯವಾಗಿ ಗುರುತಿಸುತ್ತೇವೆ. ಹಾಗಾದರೆ ಕೆಳಸ್ತರದ ನೋವನ್ನು ಅನುಭವಿಸಿದ ವ್ಯವಸ್ಥೆಯ ಕೀಳಿರಿಮೆಗೊಳಗಾದ ವಚನಕಾರ್ತಿಯರಲ್ಲಿ ಈ ಭಾವನೆ ಕಾಣದಿರಲು ಅವರು ಈ ಭಾವವನ್ನು ಹೊಂದದೆ ಇರಲು ಕಾರಣವೇನು? ಅಸ್ಪೃಶ್ಯ ಜಾತಿಗೆ ಸೇರಿದ ಕಾಳವ್ವೆ, ಸಮಾಜದ ಅವಜ್ಞೆಗಿಡಾದ ರೆಮ್ಮವ್ವೆ, ಸೋಮವ್ವ, ಲಿಂಗಮ್ಮ, ಲಕ್ಕಮ್ಮ ನಂತವರ ವಚನಗಳನ್ನು ಗಮನಿಸಿದಾಗ ಈ ಭಾವದ ವಚನಗಳು ಕಂಡುಬರುವುದಿಲ್ಲ, ಕಾರಣ ಮಹಾದೇವಿಯರಂತೆ ಇವರು ಲೌಕಿಕ ಗಂಡಂದಿರನ್ನು ತ್ಯಜಿಸಿದವರಲ್ಲ, ಲೌಕಿಕ ಗಂಡನಿದ್ದು ದೇವರಾದರೂ ಅತನನ್ನು ಗಂಡನೆಂದು ಒಪ್ಪಿಕೊಳ್ಳಲು ಅವರಿಗೆ ಮುಜುಗರವಾಗಿರಬಹುದೇನೋ? ಒಟ್ಟಾರೆ ಅವರ ವಚನಾಂಕಿತಗಳನ್ನು ಕಂಡಾಗ ಪುರುಷನಿಂದಲೇ ಗುರುತಿಸಿಕೊಂಡಿರುವದನ್ನು ಗಮನಿಸಬಹುದು.

'ಪರಮ ಪತಿವ್ರತೆಗೆ ಗಂಡನೊಬ್ಬನೆ'[೧೧] 'ಗಂಡನುಳ್ಳಮ್ಮನ ಗೌರಿ ಮಹಾದೇವಿ ಎಂಬೆ' 'ಪುರುಷ ದೈವವೆಂದು ಅರಿತು ಆತನ ಗುಣವನೋಡದೆ ತನ್ನ ಗುಣವ ಬಿಡದೆ ಇದ್ದಡೆ ಪತಿವ್ರತೆ ಎನಿಸುವಳು. ಮೇಲೆ ಮುಕ್ತಿಯುಪ್ಪುದು.' ಎಂಬ ವಚನಗಳೆಲ್ಲ ಸತಿಗೆ ಪತಿಯೇ ಪರದೈವ ಸ್ತ್ರೀ ಪಕ್ತಿತ್ವಕ್ಕೆ ಬದ್ಧಳಾಗಿದ್ದ ವಿದ್ರೋಹದ ಸಂಗತಿಗಳನ್ನು ಗ್ರಹಿಕೆಗೆ ತರುತ್ತದೆ.

ನಮ್ಮ ಸಾಮಾಜಿಕ ಪರಿಸರದಲ್ಲಿ ಹೆಣ್ಣು ಗಂಡಿನ ವವಶವರ್ತಿಯೆ ವಿನಾಃ ಗಂಡು ಹೆಣ್ಣಿನ ವವಶವರ್ತಿಯಲ್ಲ, ಪಾತಿವ್ರತ್ಯದ ಕಲ್ಪನೆ ಹೆಣ್ಣಿಗೆ ಅನ್ವಿಯಿಸುವಂತೆ ಗಂಡಿಗೆ ಅನ್ವಯಿಸಲಾಗದು ಗಂಡು ಹೆಣ್ಣಿಗಿಂತ ಸಮರ್ಥ. ಮೇಲು ಎಂಬ ಭಾವನೆಗಳು ಬೇರೂರಿ ಬಿಟ್ಟವೆ. ಈ ಬೇರು ಸಡಿಲುಗೊಳ್ಳುವುದು ಸುಲಭಸಾಧ್ಯವಲ್ಲ, ಸತಿ ಪತಿ ಭಾವದಲ್ಲಿ ಹೆಣ್ಣು ತನ್ನ ಗಂಡನಿಗೆ ಸಂಪೂರ್ಣವಾಗಿ ವಶವರ್ತಿಯಾದಂತೆ ಗಂಡು ಹೆಣ್ಣಿಗೆ ವಶವರ್ತಿಯಾಗಲಾರ, ಕಲ್ಪನೆಯಿಂದ ಹೆಣ್ತನ ಅನುಭವಿಸಿದರೂ ಅನುಭವವಲ್ಲ, ಆದರೆ ಅಕ್ಕಮಹಾದೇವಿಯಲ್ಲಿ ಕಂಡ ಸತಿ-ಪತಿ ಭಾವದ ವಚನಗಳ ಹಾದಿಯೇ ಬೇರೆ

*'ಅವರಾರ ಪರಿಯಿಲ್ಲ ಎಮ್ಮ ನಲ್ಲನು*
*ವಿಶ್ವವೆಲ್ಲವೂ ಸತಿಯರು, ಸೋಜಿಗದ ಪುರುಷನು*
*ಅವರವರ ಪರಿಯಲ್ಲೆ ಅವರವರ ನೆನೆವನು*[೧೨]

ಎನ್ನುವಲ್ಲಿ ಶಿವನ ಕೂಟದ ಪರಿಯನ್ನು ಬೌದ್ಧಿಕ ವಿಶ್ಲೇಷಣೆಗೆ ಒಳಪಡಿಸಿದ್ದಾಳೆ, 'ಹರನೇ ನೀ ನನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆನೋಡಾ' ಎಂದು ತನ್ನ ಗಂಡನನ್ನು ಮಾತನಾಡಿಸಿದ್ದಾಳೆ. 'ಆದರೆ ಇತರ ವಚನಕಾರ್ತಿಯರಲ್ಲಿ ಈ ಸತಿ-ಪತಿ ಭಾವದ ವಚನಗಳನ್ನು ಕಾಣದಿರಲು ಬೇರೊಂದು ಕಾರಣ ಇರಬಹುದು. ಲೈಂಗಿಕ ಸುಖವನ್ನು ನಿಜ ಜೀವನದಲ್ಲಿ ತಕ್ಕ ಮಟ್ಟಿಗಾದರೂ ತೃಪ್ತಿಕರವಾಗಿ ಪಡೆದವರ ಭಾವನೆಯು ಹಾಗೆ ಪಡೆಯದವರಂತೆ ಆಳವಾಗಿ ವ್ಯಕ್ತವಾಗಲಾರದು ಅಲ್ಲವೆ? ಹಾಗಾಗಿ ಅಂತಹವರು ಶಿವನೊಡನೆ ಸೇರುವ ಸುಖಕ್ಕಾಗಿ ಲೈಂಗಿಕಾನುಭವದ ರೂಪದಲ್ಲಿ ಹಾತೊರೆಯಲಾರರು'[೧೩] ಎಂಬ ಮಾತು ಸ್ಪಷ್ಟಗೊಳ್ಳುವುದು.

*'ನಮ್ಮ ನಲ್ಲನ ಕೂಟವ ಇದಿರಿಗೆ ಹೇಳಬಾರದವ್ವಾ*
*ನಿವೆಲ್ಲಾ ನಿಮ್ಮ ನಲ್ಲನ ಕೂಡಿದ ಸುಖವ ಬಲ್ಲಂತೆ ಹೇಳಿ*
*ಉರಿಲಿಂಗದೇವ ಬಂದು ನಿರಿಯ ಸೆರಗ ಸಡಿಲಿಸಲೊಡನೆ*
*ನಾನೂ ತಾನೂ ಏನಂದರಿಯೆ*[೧೪]

ಈ ವಚನದಲ್ಲಿ ಪ್ರೀಯನ ಸಮಾಗಮದಲ್ಲಿ ಮೈಮರೆಯುವ ಮುಗ್ಧ ಹೆಣ್ಣಿನ ಉತ್ಕಟ ಮಾನಸಿಕ ಸ್ಥಿತಿಯನ್ನು ನಿರೂಪಿಸಲಾಗಿದೆ. ಈ ಭಾವದಲ್ಲಿ ಆತ್ಮ-ಪರಮಾತ್ಮಗಳ ಸಮ್ಮಿಲನದಲ್ಲಿ ಸರ್ವಾರ್ಪಣ

ಭಾವ ಮುಖ್ಯವಾಗಿದ್ದು, ಈ ಸರ್ವಾರ್ಪಣ ಭಾವ ಸತಿ-ಪತಿಗಳ ಭಾವದಲ್ಲಿ ಉನ್ನತ ಅರ್ಥವನ್ನು ಪಡೆಯುತ್ತದೆ.

'ಸತಿ-ಭಾವದ ವಚನಗಳಲ್ಲಿ ಹೆಣ್ಣಿನ ವಿರಹ-ಮಿಲನ ಭಾವಗಳ ನಿನದವಿದೆ. ಆದರೆ ಲೌಕಿಕ ಹೆಣ್ಣಿನ ವಿಷಯವಲ್ಲ, ಶರಣರು ತಮ್ಮ ಸಾಧನಾ ಮಾರ್ಗದಲ್ಲಿ ಒಂದು ಹಂತದಲ್ಲಿ ಶರಣ ಸತಿ ಎನಿಸುವರು.'[೫೫] ಇಲ್ಲಿ ಭಕ್ತ ಸತಿತನದ ದೀಕ್ಷೆಯನ್ನು ಹೊತ್ತು ಲಿಂಗಪತಿಯ ಅನುಸಂಧಾನಕ್ಕಾಗಿ ಅಣಿಯಾಗುತ್ತಾನೆ. ಇಲ್ಲಿ ಶರಣ ಸತಿಯ ನೆಪದಲ್ಲಿ ಲೌಕಿಕ ಹೆಣ್ಣಿನ ಛಾಯೆಯನ್ನು ಗ್ರಹಿಸುವೆವು. ಆದರೆ ಈ ಸತಿ-ಪತಿ ಭಾವನೆಯನ್ನು ವ್ಯವಸ್ಥೆಯ ಉಪೇಕ್ಷೆಗೊಳಗಾದ ಅಂಬಿಗರ ಚೌಡಯ್ಯ ನಿರಾಕರಿಸಿದುದನ್ನು ಈ ಕೆಳಗಿನ ವಚನದಲ್ಲಿ ಕಾಣಬಹುದು.

*'ಶರಣಸತಿ ಲಿಂಗಪತಿ ಎಂಬರು ಶರಣ ಹೆಣ್ಣಾದ ಪರಿ ಇನ್ನೆಂತು?*
*ಲಿಂಗಗಂಡಾದ ಪರಿ ಇನ್ನೆಂತು? ನೀರು ನೀರ ಕೂಡಿ ಬೆರೆದಲ್ಲ*
*ಭೇದಿಸಿ ಬೇರೆ ಮಾಡಬಹುದೆ?*
*ಆತುರ ಹಿಂಗಿ ಘಟ ಬೇರಾಯಿತು*
*ಶರಣಸತಿ - ಲಿಂಗಪತಿ ಎಂಬ ಮಾತು ಮೊದಲಿಗೆ ಮೋಸ*
*ಲಾಭಕ್ಕೆದೀನ ಉಂಟೆ ಎಂದನಂಬಿಗರ ಚೌಡಯ್ಯ*[೯೬]

ಕಾಯಕ ನೆಲೆಯಿಂದಲೆ ಕಂಗೊಳಿಸಿ ಅತ್ಮತೃಪ್ತಿಯನ್ನು ಪಡೆದ ಚೌಡಯ್ಯನಿಗೆ ಬೆರಸಿ ಭೇದಿಸುವ ಭಾವ ಹಿಡಿಸಿಲ್ಲ. ಸತಿ-ಪತಿಗಳು ಬೆರೆತು ಆತುರ ಹಿಂಗಿದ ಬಳಿಕ ಎರಡು ದೇಹಗಳು ಬೇರೆಯಾಗಲೇ ಬೇಕೆಂಬ ಸತ್ಯದ ಆಧಾರದ ಮೇಲೆ ಚೌಡಯ್ಯ ಅಮೂರ್ತತೆಗಿಂತ ಮೂರ್ತ ಬದುಕುಶುದ್ಧವಾದದ್ದು ಎಂಬುದನ್ನು ಅರ್ಥೈಯಿಸಿರುವನು. ಇದರಿಂದ ಆತನು ಕಾಯಕದ ಮೇಲೆ ಹೊಂದಿದ ಅಪಾರ ನಂಬಿಕೆ ಸ್ಪಷ್ಟಗೊಳ್ಳುವುದು. ಸತಿ-ಪತಿ ಎಂಬ ಮಾತೇ ಮೋಸ ಎಂಬ ಸತ್ಯವನ್ನು ಹೇಳುವನು. ಇಲ್ಲಿ ಭಕ್ತ-ದೇವರ ಸಂಬಂಧ ಸತಿ-ಪತಿ ಭಾವಕ್ಕಿಂತ ಬೇರೆಯಾದುದು, ಅದನ್ನು ಬೇರ್ಪಡಿಸಲು ಆಗದು ಎಂದಿರುವನು. ಆದರೆ ಅದೇ ಬಸವಣ್ಣನವರಲ್ಲಿ ಈ ಸತಿ-ಪತಿ ಭಾವ ತುಂಬಿ ಹರಿದಿದೆ. 'ಜಗವೆಲ್ಲ ಅರಿಯಲು ಎನಗೊಬ್ಬ ಗಂಡನುಂಟು ಆನು ಮುತ್ತೈದೆ ಆನು ನಿಚ್ಚೈದೆ ಕೂಡಲ ಸಂಗಯ್ಯನಂತಪ್ಪ ಎನಗೊಬ್ಬ ಗಂಡನುಂಟು'[೯೭] ಎನ್ನುವಲ್ಲಿ ಬಸವಣ್ಣನವರು ಸಂಪೂರ್ಣವಾಗಿ ಸತಿತ್ವನ್ನು ಹೊಂದಿ ತನ್ನ ಗಂಡನನ್ನು ಇತರರಿಗೆಲ್ಲ ಪರಿಚಯಿಸುವ ರೀತಿ ಇಲ್ಲಿ ವ್ಯಕ್ತವಾಗಿದೆ.

*'ಎಲೆ ಗಂಡುಗೂಸೆ, ನೀ ಕೇಳಾ*
*ನಿನಗೊಬ್ಬಂಗೆಂದುಟ್ಟೆ, ಗಂಡುಡಗೆಯನು*
*ಮತ್ತೊಮ್ಮೆ ಆನು ಗಂಡಪ್ಪೆನಯ್ಯ*

*ಮತ್ತೊಮ್ಮೆ ಆನು ಹೆಣ್ಣಪ್ಪೆನಯ್ಯ*
*ಕೂಡಲ ಸಂಗಮದೇವಾ,*
*ನಿನಗೆ ವೀರನಪ್ಪೆ ನಿಮ್ಮ ಶರಣರಿಗೆ ವದುವಪ್ಪೆ*[೧೮]

ಎನ್ನುವ ಬಸವಣ್ಣನ ಈ ವಚನದಲ್ಲಿ 'ಪುರುಷ ಉಡುಗೆಗಳು ಅಪ್ರಧಾನ, ಆತನ ಪುರುಷ ರೂಪ ಕೇವಲ ಬಾಹ್ಯಲಕ್ಷಣವಾಗಿದೆ. ಸಾಮಾಜಿಕವಾಗಿ ಆತನು ಪುರುಷನ ಉಡುಪು ಧರಿಸಿ ಪುರುಷನಂತೆ ವರ್ತಿಸಬಲ್ಲನು, ಆದರೆ ಉಳಿದ ಸಂದರ್ಭಗಳಲ್ಲಿ ಅವನು ಸ್ತ್ರೀಯಾಗಿ ಪಾತ್ರ ವಹಿಸಬಲ್ಲನು' ಇಲ್ಲಿ ಸತಿ-ಪತಿ ಇಬ್ಬರು ಲಿಂಗಕ್ಕೆ ಅಧೀನ, ಸತಿ ಭಾವದಿಂದಲೇ ಬದುಕುವುದು,

'ಜೀವಾತ್ಮವು ಪರಮಾತ್ಮನಲ್ಲಿ ಐಕ್ಯತ್ವ ಪಡೆಯಲು ಸಾಧಿಸಲು ಅಂತಿಮ ಸಾಧನೆಯೇ 'ಶರಣಸತಿ ಲಿಂಗಪತಿ' ಭಾವ ಈ ಸಾಧನೆಯ ಮಾರ್ಗದಲ್ಲಿ ಸಾಧಕನು ಈ ಜಗತ್ತಿನ ಎಲ್ಲ ವ್ಯವಹಾರಗಳನ್ನು ಮರೆತು ಲಿಂಗದೊಂದಿಗೆ ಅಂಗವನ್ನು ಬೆರಸಿ ಮಧುರ ಭಾವದ ರತಿಸುಖಾನಂದವನ್ನು ಪಡೆಯುವುದೇ ಈ ಭಾವದ ಅಂತಿಮ ಉದ್ದೇಶ' ಇಲ್ಲಿ ಲಿಂಗಾಂಗ ಸಾಮರಸ್ಯವು ಕೇವಲ ಲೌಕಿಕ ಸತಿ-ಪತಿಯರ ಕಾಯ ಸಂಬಂಧವಲ್ಲ ಅಲೌಕಿಕ ಪ್ರೇಮ ಸಂಬಂಧ, ಈ ಲಿಂಗದ ಜೊತೆಗಿನ ದಾಂಪತ್ಯದ ಅನುಭವದಿಂದಲೆ ಗಳಿಸಿಕೊಂಡ ಸ್ತ್ರೀಭಾವ ಸಾಮಾಜಿಕ ಜೀವನದ ಮೇಲೆ ಗಾಢಪರಿಣಾಮ ಬೀರಿತು.

ಸತಿ-ಪತಿ ಭಾವದ ವಿಚಾರದಲ್ಲಿ ಶರಣರಲ್ಲಿ ಒಮ್ಮತವಿರಲಿಲ್ಲ ಎಂಬುದು ಅವರ ವಚನಗಳಿಂದ ವ್ಯಕ್ತಗೊಳ್ಳುವುದು.

## ೩.೩. ಆಧ್ಯಾತ್ಮಿಕ ಸಂಘರ್ಷ

ವಚನ ಚಳುವಳಿ ಮೂಲತಃ ಸಾಮಾಜಿಕ ಧಾರ್ಮಿಕ ಸ್ವರೂಪದಾಗಿದ್ದು ಪ್ರತಿಷ್ಠಿತ ಶಕ್ತಿಗಳ ವಿರುದ್ಧ, ಪಟ್ಟಭದ್ರಹಿತಾಸಕ್ತಿಗಳ ವಿರುದ್ಧ, ವೈಧಿಕ ಧರ್ಮದ ಜಡ ಅಸಮಾನತೆಗಳ ವಿರುದ್ಧ ಮೊಟ್ಟ ಮೊದಲು ಪ್ರತಿಭಟಿಸಿ ಅದಕ್ಕೆ ಪ್ರತಿಯಾಗಿ ಜಾತಿ, ವರ್ಗ, ಲಿಂಗಭೇದಗಳಿಲ್ಲದ ಸಮಾನತಾ ಸಮಾಜವೊಂದನ್ನು ನಿರ್ಮಿಸುವದಾಗಿದ್ದರೂ ಆಧ್ಯಾತ್ಮಿಕ ಮೂಲದ ಕೆಲವು ಸಂಘರ್ಷಗಳನ್ನು ತನ್ನ ತೆಕ್ಕೆಯಲ್ಲಿ ತಬ್ಬಿಕೊಂಡು ಈ ಚಳುವಳಿ ಬೆಳದಿದೆ.

ಈ ಸಂಘರ್ಷವು ಮೇಲು ನೋಟಕ್ಕೆ ಒಬ್ಬ ವ್ಯಕ್ತಿಯ ಸ್ವಭಾವಕ್ಕೆ ಅನ್ವಯವಾಗುವ ಅಂತರ್ನಿರೀಕ್ಷೆಯ ಸಂಘರ್ಷದಂತೆ ಕಂಡು ಬಂದರೂ ಅದು ಅಷ್ಟಕ್ಕೆ ನಿಲ್ಲುವುದಿಲ್ಲ, ಇಡೀ ಒಂದು ವರ್ಗದ ನೆಲೆಯ ನಡವಳಿಕೆಯನ್ನೇ ಪ್ರಶ್ನಿಸುವ ಟೀಕಿಸುವ ಕಟುವಾಗಿ ವಿರೋಧಿಸುವ ಕ್ರಿಯೆಯಾಗಿ ಅದು ಬೆಳೆದಿದೆ. ಸಂಸ್ಥೀಕರಣಗೊಂಡಿದ್ದ ಧಾರ್ಮಿಕ ಆಚರಣೆಗಳ ವಿರುದ್ಧ ಎಲ್ಲ ಸ್ತರದ ವಚನಕಾರರೆಲ್ಲರು

ಪ್ರತಿಕ್ರಿಯಿಸಿದ್ದು ನಿಜವಾದರೂ ವ್ಯವಸ್ಥೆಯ ಅವಜ್ಞೆಗೀಡಾದ ವಚನಕಾರ್ತಿರ ನಿಲುವುಗಳು ನಿಷ್ಠುರವಾಗಿದ್ದವು. ನೈತಿಕ ಅಧಿಕಾರದಿಂದ ಹರಿತವಾಗಿವೆ ಅಲ್ಲದೆ ಇವರ ವಚನಗಳಲ್ಲಿ ವರ್ಗಮೂಲದ ಸಂಕಟ-ನೋವುಗಳಿವೆ.

*'ಉದಯದಲೆದ್ದು ಪತ್ರೆಪುಷ್ಪಗಳಿಗೆ ಹೋಗುವ*
*ಅಣ್ಣಗಳಿರಾ ನೀವು ಕೇಳಿರೋ*
*ಹಸಿಯ ತಪ್ಪಲನೆ ತಂದು*
*ಆ ದೇವನ ಮಸ್ತಕದ ಮೋಲೊಟ್ಟುವ*
*ಆ ತೊಪ್ಪಲನೆ ತಂದು ಬಿಸಿ ಮಾಡಿ*
*ಪಶು ಪತಿ ಎಂಬ ಜಂಗಮಕ್ಕೆ ನೀಡಿದೊಡೆ*
*ಆ ಜಂಗಮ ಬಸಿರ ತುಂಬಿದೊಡೆ*
*ಲಿಂಗದ ಹಸಿವಡಗಿದೆಂದಾತ ನಮ್ಮ ಅಂಬಿಗರ ಚೌಡಯ್ಯ'*[೨೦]

ಎನ್ನುವ ಅಂಬಿಗರ ಚೌಡಯ್ಯನ ವಚನದಲ್ಲಿ ಕಲ್ಲು ದೇವರನ್ನು ಪೂಜಿಸುವವರನ್ನು ಮಾನಹೀನರೆಂದು ಅಪಹಾಸ್ಯಕ್ಕಿಡು ಮಾಡಿದ್ದು ಕಂಡು ಬರುವುದು. ಹಸಿವಿನ ಅನುಭವ ಪಡೆದ ಚೌಡಯ್ಯನ ಅಂತಃಕರಣ ಡಾಂಭಿಕತೆಯನ್ನು ಒಪ್ಪುವದಿಲ್ಲ, ಆಧ್ಯಾತ್ಮಿಕತೆಗಿಂತ ಅನ್ನವೇ ಮುಖ್ಯ. ' ದೇಹಾರವ ಮಾಡುವ ಅಣ್ಣಗಳಿರಾ ಒಂದು ತುತ್ತು ಆಹಾರವನ್ನಿಕ್ಕಿರೆ ದೇಹಾರಕ್ಕೆ ಆಹಾರವೇ ನಿಚ್ಚಣಿಕೆ'[೨೧] ಎನ್ನುವಲ್ಲಿ ಅನ್ನದ ಅವಶ್ಯಕತೆಯ್ನನು ಎತ್ತಿ ಸಾರಿದ್ದು ಸ್ಪಷ್ಟ. ಇದು ವ್ಯಕ್ತಿಯೊಬ್ಬನ ಹಸಿವಲ್ಲ. ಇಡೀ ಕೆಳಸ್ತರದ ಅವಜ್ಞೆಗೀಡಾದ ಜನ ಸಮುದಾಯದ ಸಮಸ್ಯೆಯಾಗಿರಲಿಕ್ಕೆ ಸಾಕು, 'ನೊಂದವರ ನೋವನು ನೊಯದವರತ್ತ ಬಲ್ಲರು? ಎಂಬಂತೆ ಹಸಿವಿನ ಬೇಗುದಿ ಬಲ್ಲವರೆ ಇದರ ಅರ್ಥ ಹೇಳಬಲ್ಲರು, ಇಲ್ಲಿ ಮೇಲ್ವರ್ಗ ಮತ್ತು ಕೆಳವರ್ಗಗಳ ಸಂಕೀರ್ಣ ವಾಸ್ತವತೆ ಎದ್ದು ತೋರುವುದು, ಮೆಲಸ್ತರದ ವಚನಕಾರರು ತಾವು ಎಷ್ಟೇ ಕೀಳಿಕರಣಗೊಂಡರೂ ಚೌಡಯ್ಯನ ನಿಲುವಿಗೆ ಬರಲು ಸಾಧ್ಯವಿಲ್ಲ.

*'ಕುರಿ ಕೋಳಿ ಕಿರಿಮೀನು ತಿಂಬವರಿಗೆಲ್ಲ ಕುಲಜ ಕುಲಜ ರೆಂಬರು*
*ಶಿವಗೆ ಪಂಚಾಮೃತ ಕರೆವ ಪಶವ ತಿಂಬ ಮಾದಿಗ ಕೀಳು ಜಾತಿಯೆಂಬರು.*
*ಅವರೆಂತು ಕೀಳು ಜಾತಿಯಾದರು? ಜಾತಿಗಳೇ ನಿವೇಕೆ ಕೀಳಾಗಿರೋ'*[೨೨]

ಎನ್ನುವ ಕಾಳವ್ವೆ 'ಕುರಿ ಕೋಳಿ ಕಿರುಮೀನು ತಿಂಬುವರ ಊರೊಳಗೆ ಇರು ಎಂಬರು ಅಮೃತಾನ್ನವ ಕರೆವ ಗೋವ ತಿಂಬವರ ಊರಿಂದ ಹೊರಗಿರು ಎಂಬರು' ಎಂದು ನುಡಿದ ಅಂಬಿಗರ ಚೌಡಯ್ಯ ಇವರಿಬ್ಬರು ವ್ಯವಸ್ಥೆಯ ಅವಜ್ಞೆಗೀಡಾದ ವರ್ಗದಿಂದ ಬಂದವರಾಗಿದ್ದರು ಕೂಡ ಕೀಳರಿಮೆ ಹೊಂದದೆ ಆತ್ಮಸ್ಥೈರ್ಯದಿಂದ ನುಡಿದಿರುವುದು ಮುಖ್ಯ. ಇಲ್ಲಿ ಶಿಷ್ಟಧರ್ಮಗಳು ಕೆಳಸ್ತರದ

ವರ್ಗದವರ ಆಹಾರ ಪದ್ಧತಿಯಲ್ಲಿ ನಿರ್ಬಂಧ ಹೇರಿರುವ ಅಂಶ ಎದ್ದು ತೋರುವುದು. ಅದಕ್ಕೆ ಪಕ್ಕಾ ಲೌಕಿಕರಾದ ಈ ಜನ ರುಚಿಯಾದುದನ್ನು ತಿನ್ನುವುದರಲ್ಲಿ ತಪ್ಪಿಲ್ಲ ಎಂದು ತಮ್ಮ ಮಾಂಸಾಹಾರ ಪದ್ಧತಿಯನ್ನು ಸಮರ್ಥಿಸಿಕೊಂಡಿದ್ದಾರೆ. ಅಲ್ಲದೆ 'ಜಾತಿಗಳೇ ನೀವೇಕೆ ಕೀಳಾದಿರೋ' ಎಂದು ನೇರವಾಗಿ ಪ್ರಶ್ನಿಸಿ ಕೆಳವರ್ಗದವರ ಅಂತಃ ಶಕ್ತಿಯನ್ನು ಜಾಗೃತಗೊಳ್ಳುವಂತೆ ಮಾಡುತ್ತಾಳೆ.

ಪವಿತ್ರ ಪ್ರಾಣಿಯಾದ ಸತ್ತ ಗೋವು ತಿನ್ನುವರು ಕೀಳು ಅವರು ಊರೊಳಗಿರಲು ಅನರ್ಹರು ಆದರೆ ಧರ್ಮದ ಹೆಸರಿನಲ್ಲಿ ಅನೇಕ ಪ್ರಾಣಿಗಳನ್ನು ಬಲಿಕೊಟ್ಟು ತಿನ್ನುವ ಬ್ರಾಹ್ಮಣರು, ಶ್ರೇಷ್ಠರು ಹೇಗೆ? ಅವರೇಕೆ ಊರೊಳಗಿರಲು ಅರ್ಹರು? ಎನ್ನುವ ಪ್ರಶ್ನೆಗಳಲ್ಲಿ ಸಂಘರ್ಷದ ಧ್ವನಿ ಅಡಗಿದೆ. ಬಹಳ ಮುಖ್ಯವಾಗಿ ಈ ಧ್ವನಿ ಬ್ರಾಹ್ಮಣರ ಗೋಮಾಂಸ ಭಕ್ಷಣೆಯ ಒಂದು ಹಂತದ ವಿವರಣೆಯನ್ನು ನೀಡುತ್ತದೆ. ಮತ್ತು ಶಿಷ್ಟಧರ್ಮದ ನಿರ್ಭದಗಳನ್ನು ಉಲ್ಲಂಘಿಸಲು ಪ್ರಯತ್ನಿಸಿದ್ದು ಮುಖ್ಯ.

ಪತಿತೆಯರು, ಪತಿತ್ಯಕ್ತರು ಸಂಸಾರಿಕ ಜೀವನದಲ್ಲಿ ವಿರಸವನ್ನು ಅನುಭವಿಸುವವರು, ಸ್ವಭಾವತಃ ವಿರಕ್ತ ಮನೋಭಾವದವರು ಶೂದ್ರರು, ಸೂಳೆಯರು ಇಂಥ ಸ್ತ್ರೀಯರಿಗೆಲ್ಲ ಈ ಚಳುವಳಿ ಉದಾರ ದೃಷ್ಟಿಯಿಂದ ಸಹಾನುಭೂತಿಯನ್ನು ತೋರಿದ್ದರೂ ಅವರ ಆತ್ಮಿಕ ಶಾಂತಿ ಮಾತ್ರ ಗಗನ ಕುಸುಮವಾಗಿತ್ತೆಂಬುದು ಅವರ ವಚನಗಳಿಂದ ವ್ಯಕ್ತಗೊಳ್ಳುವುದು. ಸ್ತ್ರೀಯನ್ನು ದೇವಿಯೆಂದು ಆರಾಧಿಸುತ್ತ ಬಂದ ಭಾವನೆ ಏನೋ ಬಹು ಪೂರ್ವದ್ದು ಆದರೆ ಇತಿಹಾಸದ ಪುಟಗಳನ್ನು ಗಮನಿಸಿದಾಗ ಸ್ತ್ರೀ ನಿಂದೆ ಒಂದು ಪದ್ಧತಿಯಾಗಿ ಬೆಳೆದು ಬಂದಿದ್ದನ್ನು ಕಾಣಬಹುದಲ್ಲದೆ ಜಗತ್ತಿನ ದೊಡ್ಡ ದೊಡ್ಡ ದಾರ್ಶನಿಕರು ಒಂದಲ್ಲ ಒಂದು ರೀತಿಯಲ್ಲಿ ಹೆಣ್ಣನ್ನು ನಿಂದಿಸಿದ್ದು ಸ್ಪಷ್ಟಗೊಳ್ಳುವುದು. "ಆರ್ಥಿಕವಾಗಿ ಪುರುಷಾವಲಂಬಿಯಾಗಿ ಬಾಳಬೇಕಾದ ಸ್ಥಿತಿಗಳಲ್ಲಿ ಹೆಣ್ಣಿಗೆ ಹಕ್ಕುಗಳ ಬದಲು ಕರ್ತವ್ಯಗಳ ಹೊರೆಗಳಿರುತ್ತವೆ. ಅದರಲ್ಲಿ ಮುಖ್ಯವಾದುದು ಗಂಡನಿಗೆ ಲೈಂಗಿಕ ನಿಷ್ಠೆ ತೋರುವುದು. ಆ ನಿಷ್ಠೆಯಲ್ಲಿ ಸಡಿಲತೆ ಬಂದಾಗ ಆಕೆ ಹೀನಾಯವಾಗಿ ಪರಿಗಣಿಸಲ್ಪಡುತ್ತಾಳೆ. ಬಹುಪತ್ನಿತ್ವ ಅಥವಾ ಸಮೂಹ ವಿವಾಹಗಳಿರುವ ಬುಡಕಟ್ಟುಗಳಲ್ಲಿ ಹೆಣ್ಣಿನ ಲೈಂಗಿಕ ಪಾವಿತ್ರ ಮುಖ್ಯವಲ್ಲ, ಒಬ್ಬ ಗಂಡಸಿಗೆ ನಿಷ್ಠೆಯು ನಿರ್ಣಾಯಕ ಸಂಗತಿಯಲ್ಲ, ಆದರೆ ಯೋನಿ ಪಾವಿತ್ರ್ಯ ನಿರೀಕ್ಷಿಸುವ ಸಾಮಾಜಿಕ ವ್ಯವಸ್ಥೆಗಳಲ್ಲಿ ಆಕೆಯ ಅಸ್ತಿತ್ವವು ಈ ನಿಷ್ಠೆ 'ಶೀಲ'ಗಳ ಮೇಲೆ ನಿರ್ಧಾರವಾಗುತ್ತದೆ. ಆಗ ಪರಮ ಪತಿವ್ರತೆಗೊಬ್ಬನೇ ಗಂಡ' ಎನ್ನುವ ವಚನಕಾರನಿಗೆ ಇಬ್ಬರು ಹೆಂಡಿರಿದ್ದರು ಎಂಬುದು

ವಿರೋಧಾಬಾಸವಾಗುವುದಿಲ್ಲ'[೨೩] ಇಂತಹ ಸಡಿಲಿಕೆಗಳು ಕಂಡು ಬರುತ್ತವೆ. ಪುರುಷನಿಂದಲೇ ಉಲ್ಲೇಖಿಸಲ್ಪಟ್ಟ ಸ್ತ್ರೀನಿಂದೆ ಬಹುಶಃ ನಮ್ಮ ಲೌಕಿಕ ವೈಚಾರಿಕ ತಳಹದಿಯ ಆದಿಯಿಂದಲೇ ದೊರೆಯುತ್ತದೆ.

*'ಉದಮದದ ಯೌವ್ವನವ ನೊಳಕೋಂಡ ಸತಿ ನೀನು*
*ಇತ್ತಲೇಕೆ ಬಂದೆಯವ್ವ! ಸತಿ ಎಂದರೆ ನಮ್ಮ,*
*ಶರಣರು ಮುನಿವರು...... ಗುಹೇಶ್ವರ'*

ಈ ವಚನದಲ್ಲಿ ೧. ತುಂಬ ಯೌವ್ವನೆಯು ನೀನು, ೨.ಹೆಣ್ಣು ಎಂದರೆ ನಮ್ಮ ಶರಣರು ದೂರಸರಿಯುವರು, ೩. ಪತಿಯುಕ್ತಳಾದ ಹೆಣ್ಣಿಗೆ ಸಮಾಜದಲ್ಲಿ ಗೌರವ ಸ್ಥಾನ, ೪. ಪತಿರಹಿತ ಹೆಣ್ಣನ್ನು ಯಾರು ಗೌರವಿಸರು, ೫. ನಿನ್ನ ಪತಿ ಹೆಸರ ಹೇಳು, ೬. ನಿನ್ನ ಚಾರಿತ್ರ್ಯ ಶುದ್ಧಿ ಮಹತ್ವದ್ದು.

ಈ ವಚನದಲ್ಲಿ ಒಂದು ಸಮಾಜದ ಹೆಣ್ಣನ್ನು ಕುರಿತು ತಳೆದ ಅಭಿಪ್ರಾಯಗಳನ್ನು ನಮ್ಮ ಮುಂದಿಡುತ್ತದೆ. ತನ್ನನ್ನು ಹೆತ್ತ ಹೆಣ್ಣಿಗೆ ಪ್ರಶ್ನಿಸಿದ ಮೂಲ ಪ್ರಶ್ನೆಗಳು ಇವು. ಪತಿಯ ರಕ್ಷಣೆ ಅವಳಿಗೆ ಸಹಜ, ಉದಾರವಾಗಿ ಹೆಣ್ಣಿಗೆ ವೈರಾಗ್ಯ ಮಾರ್ಗವನ್ನು ಮುಕ್ತಗೊಳಿಸಿದ ಧರ್ಮ ಆಂತರ್ಯದಲ್ಲಿ ಚಿಂತಿಸುವುದು ಹೀಗೆಯೆ. ಇಲ್ಲಿ ವೈರಾಗ್ಯ ಸ್ತ್ರೀ ಗೌರವಿಸಿಲ್ಲವೆಂದಲ್ಲ, ಆದರೆ ಸಂಸ್ಕಾರಗಳು ಪತ್ನಿಯನ್ನು ಗೌರವಿಸಿವೆ.[೨೪] ಇಲ್ಲಿ ಪ್ರತಿಷ್ಠಿತ ಸಂಸ್ಕೃತಿಯ ಅಲೋಚನೆಗಳು ಸ್ಪಷ್ಟಗೊಳ್ಳುವವು,

*'ಎಲ್ಲರ ಹೆಂಡಿರು ತೊಳಸಿಕ್ಕುವರು*
*ಎನ್ನ ಗಂಡಂಗೆ ತೊಳಸುವುದಿಲ್ಲ*
*......*
*ಎನ್ನ ಗಂಡ ಕೆಳಗೆ ನಾ ಮೇಲ್'*[೨೫]

ರೆಮ್ಮವ್ವೆಯ ಈ ವಚನ 'ವೀರಶೈವ ಚಳುವಳಿಗೆ ಮತಾಂತರ ಹೊಂದಿದ ಮೇಲೆ ತನ್ನ ಸ್ಥಾನಮಾನದಲ್ಲಿ ಉಂಟಾದ ಬದಲಾವಣೆಯನ್ನು ಸ್ಪಷ್ಟಪಡಿಸುತ್ತದೆ. ಹೆಣ್ಣು ಸಾಮಾನ್ಯ ವೈವಾಹಿಕ ಜೀವನದಲ್ಲಿ ಗಂಡಿಗೆ ಅಧೀನವಾಗಿರುವ ಸಂಗತಿಯನ್ನು ಆಕೆ ವರ್ಣಿಸಿ ಎಲ್ಲಾ ಬಗೆಯ ಸೂತಕಗಳಿಂದ ಬಿಡುಗಡೆ ಪಡೆದು ಪವಿತ್ರಳಾಗಬೇಕಾದ ನಿರ್ಬಂಧಗಳನ್ನು ಹೆಣ್ಣಿಗೆ ಮಾತ್ರ ಪುರುಷ ನಿಯಮಿಸಿದ್ದಾನೆ. ಹೆಣ್ಣು ತನ್ನೆಲ್ಲಾ ಭೌತಿಕ ಚಟುವಟಿಕೆಗಳನ್ನು ಗಂಡಿಗಾಗಿ ಮೀಸಲಿಡಬೇಕಾಗಿದೆ. ಇಲ್ಲಿ ಹೆಣ್ಣು ಯಾರ ಅಧೀನಳೂ ಅಲ್ಲ, ಆಕೆ ಇಲ್ಲಿ ಗಂಡಿನ ಮೇಲೆ ಕುಳಿತಿದ್ದಾಳೆ. ರೂಢಿಗತ ಸ್ಥಾನಮಾನಗಳು ಪಲ್ಲಟಗೊಂಡಿವೆ.'[೨೬]

*'ಸಿರಿಯಿದ್ದ ವಸ್ತುವಿನ ವದುವಾದ ಕಾರಣ*
*ತಾನು ಹೆಣ್ಣಲ್ಲ ತನಗೆ ಹೆಣ್ಣು ನಾಮವಿಲ್ಲ'*
*'ನಾನು ಆಡಲಿಲ್ಲ ಹೆಣ್ಣು ರೂಪಧರಿಸಿ'*

'ಮಡದಿ ಎನಲಾಗದು ಎನಗೆ' ಎನ್ನುವ ನೀಲಮ್ಮನ ಈ ವಚನ ಮನದ ಒಳತೋಟಿಯನ್ನು ಕಲಕುತ್ತದೆ. ಮಹಾಪುರುಷರ ಹೆಂಡತಿಯಾಗಿ ಬಾಳುವುದು ಒಂದು ಪುಣ್ಯ ವಿಶೇಷವಾದರೂ ಅಲ್ಲಿ ಲೌಕಿಕ ಸುಖವನ್ನು ಆಪೇಕ್ಷಿಸಲಾಗದು. ನೀಲಮ್ಮ ತನ್ನನ್ನು ಬಸವನ ವಿಚಾರ ಪತ್ನಿಯ ಮಟ್ಟಕ್ಕೆ ನೇರ್ಪುಗೊಳಿಸಿಕೊಳ್ಳುತ್ತ ನಡೆದ ಡೋಲಾಯ, ಸಂದಿಗ್ಧ, ಸಂಘರ್ಷಮಯ ಮುಳ್ಳ ಹಾದಿ ಎನಿಸಿರಬೇಕು. ಒಟ್ಟಿನಲ್ಲಿ ಆಕೆಯ ಅಭಿವ್ಯಕ್ತಿಯಲ್ಲಿ ಸಾಧನೆ ಸಂಘರ್ಷಗಳ ತೃಪ್ತಿಯ ಜೊತೆಗೆ ನೋವಿನ ತುಳುಕು ಸ್ವಾಧ್ಯವಾಗುತ್ತದೆ.[೨೭] ರೆಮ್ಮವ್ವೆ ಮತ್ತು ನೀಲಮ್ಮನ ಎರಡು ವಚನಗಳು ಇಡೀ ವಚನ ಚಳುವಳಿಯ ಪುರುಷ ಪ್ರಧಾನಧಾರೆಯನ್ನು ಪ್ರಶ್ನಿಸುತ್ತಿವೆ. ಸತಿ ಪತಿ ಭಾವದ ಆಧ್ಯಾತ್ಮಿಕ ರಚನೆಗಳನ್ನೇ ಇವು ಗುಮಾನಿಯಿಂದ ನೋಡುವಂತೆ ಮಾಡುತ್ತವೆ. ವಚನ ಚಳುವಳಿಯನ್ನು ಬೇರೆ ರೀತಿಯಿಂದ ಪ್ರವೇಶ ಮಾಡಲು ಪ್ರೇರೆಪಿಸುತ್ತವೆ. ಬಸವಣ್ಣ, ಅಕ್ಕಮಹಾದೇವಿ ಆದಿಯಾಗಿ ಬಹಳಷ್ಟು ವಚನಕಾರರು ಅಧ್ಯಾತ್ಮಿಕ ನೆಲೆಯಲ್ಲಿ ಸತಿ-ಪತಿ ಭಾವದ ಅಡಿಯಲ್ಲಿ ತಮ್ಮ ಅಸ್ತಿತ್ವವನ್ನೇ ಮಸುಕಾಗಿಸಿ ದೈವವನ್ನೇ ಪ್ರಧಾನವಾಗಿಸಿ ನೋಡುವ ಆಶಯಗಳನ್ನು ಪ್ರಕಟಿಸುತ್ತಾರೆ. ಅಕ್ಕಮಹಾದೇವಿ ಯಂತೂ 'ಅಪ್ಪಿದಡೆ ಅಸ್ತಿಗಳು ನುಗ್ಗು ನುರಿಯಾಗಬೇಕು ಬೆಚ್ಚಡೆ ಬೆಸುಗೆಯನರಿಯದಂತಿರಬೇಕು' ಎನ್ನುವ ಮೂಲಕ ಪುರುಷ ಪ್ರಧಾನವಾದ ಲೌಕಿಕಾನುಭವದಲ್ಲಿಯೇ ಆಧ್ಯಾತ್ಮಿಕ ಎತ್ತರವನ್ನು ಕಾಣಬಯಸುತ್ತಾಳೆ.

ಇದಕ್ಕೆ ತದ್ವಿರುದ್ಧವಾಗಿ ರೆಮ್ಮವ್ವೆ ಮತ್ತು ನೀಲಮ್ಮನಂತಹ ವಚನಕಾರ್ತಿಯರು ತಮ್ಮ ಆಧ್ಯಾತ್ಮಿಕ ಅನುಭೂತಿಯನ್ನು ಕಂಡುಕೊಳ್ಳುತ್ತಾರೆ. ರೆಮ್ಮವ್ವೆ ಎನ್ನಗಂಡ ಕೆಳಗೆ ನಾ ಮೇಲೆ ಎನ್ನುವ ಮೂಲಕ ಪುರುಷ ಪ್ರಧಾನವಾದ ಪಾರಂಪರಿಕ ನಂಬಿಕೆಯನ್ನೇ ತಲೆ ಕೆಳಗೆ ಮಾಡುತ್ತಾಳೆ. ದಾಂಪತ್ಯವಿದ್ದರೂ ಅಧೀನವಾಗದ ಅಭಿಮಾನವನ್ನು ಇಲ್ಲಿ ಕಾಣುತ್ತೇವೆ. ಹೆಣ್ಣು ಗಂಡೆನ್ನುವ ಭೇದವನ್ನೆ ಹೊಸಕಿ ಹಾಕಿ ಆಧ್ಯಾತ್ಮಿಕ ಸಂಘರ್ಷವನ್ನೇ ಹುಟ್ಟುಹಾಕುತ್ತಾರೆ. ವಚನ ಚಳುವಳಿಯೊಳಗೆ ಜ್ವಾಲಾಮುಖಿಯಂತೆ ಇದ್ದ ಇಂಥ ಆಧ್ಯಾತ್ಮಿಕ ಒಳಜಗಳಗಳು ಕೆಳವರ್ಗದ ವಚನಕಾರ್ತಿಯರನ್ನು ಪ್ರತ್ಯೇಕವಾಗಿ ನೋಡಲು ಆಹ್ವಾನ ನೀಡುತ್ತದೆ.

'ಹೆಣ್ಣಿಗೆ ಸಂಸಾರ ವ್ಯಾಮೋಹ ಗಂಡಿನಷ್ಟು ತೀವ್ರಸಾಧಿಸದು. ಆಕೆಗೆ ಕರುಳಿನ ಸೆಳೆತ ಲೌಕಿಕ ಮೋಹ ಪ್ರಕೃತಿ ಸಹಜ ಹಲವು ವ್ಯಾಮೋಹ. ಪ್ರಕೃತಿಯನ್ನೇ ಆಕೆ ತನ್ನ ಜೀವನ ಧರ್ಮವೆಂದು

ಭಾವಿಸಿದ್ದಾಳೆ. ಧರ್ಮ ಈ ರೀತಿಯಲ್ಲಿ ಆಕೆಯನ್ನು ರೂಪಿಸುತ್ತಾ ಅಚ್ಚಿನಲ್ಲಿ ಎರಕ ಹೊಯ್ಯುತ್ತ ಬಂದಿದೆ. ಗಂಡಿಗೆ(ಬೇಕಾದರೆ) ಬಿಡು ಎಂದು ಹೇಳುವ ಧರ್ಮ ಹೆಣ್ಣಿಗೆ ಇರುವುದೇ ಸದ್ಗತಿ ಎಂದಿದೆ'[೨೮] ಇಂಥಹ ಪರಿಸರದಲ್ಲಿದ್ದು ಕೊಂಡೆ ತಮ್ಮ ಅಸಂತೋಷದ ಕಿಡಿಕಾರಿದ್ದು ಕಂಡುಬರುವುದು. ಬಸವಣ್ಣನ ಕಾಲದಲ್ಲೆ ಭಕ್ತರಾಗಿ ಪರಿವರ್ತನೆ ಹೊಂದಿದವರು ಹಿಂದೂ ಧಾರ್ಮಿಕ ವ್ಯವಸ್ಥೆಯ ಆಚರಣೆಗಳಿಗೆ ಮತ್ತೆ ಕಟ್ಟು ಬೀಳುವ ಪ್ರವೃತ್ತಿ ಪ್ರಾರಂಭಗೊಂಡಿದ್ದನ್ನು ಕಂಡೆ ಬಸವಣ್ಣನವರು ನಿಮ್ಮಿಂದ ಕುಲಜರಾಗಿ ಮತ್ತೆ ಅನ್ಯದೈವಕ್ಕೆರಗುವ ಜಗದ ನಾಯಿಗಳೆನೆಂಬೆ ಎಂದು ಬಸವಣ್ಣ ತೀವ್ರಕೋಪವನ್ನು ತಾಳಿದ್ದಾನೆ.

*'ಬೇಡ ಬೇಡ ಅನ್ಯದೈವದ ಸಂಗಹೊಲ್ಲ*
*ಬೇಡ ಬೇಡ ಅನ್ಯದೈವವೆಂಬುದು ಹಾದರ ಹಾಣೆರೋ'*[೨೯]

ಎನ್ನುವ ವಚನ ಬಸವಣ್ಣನವರ ಆಂತಕ ಒತ್ತಾಯ ಇವೆರಡನ್ನು ಸ್ಪಷ್ಟವಾಗಿ ಹೇಳುವಂತಹದ್ದು, ಮನಸ್ಸು ಕ್ರಿಯೆಗಳ ದ್ವಂದ್ವವನ್ನು ಈ ವಚನ ತಿಳಿಯ ಪಡಿಸುವದು.

*'ಹುಸಿ ಅಂಕುರಿಸಿತ್ತು ಹೊಲೆಯನಲ್ಲಿ*
*ಹುಸಿ ಎರಡಲೆಯಾಯಿತ್ತು ಮಾದಿಗರಲ್ಲಿ*
*ಹುಸಿ ನಾಲ್ಕೆಲೆಯಾಯಿತ್ತು ಸಮಗಾರನಲ್ಲಿ*[೩೦]

ಎನ್ನುವ ಚೆನ್ನಬಸವಣ್ಣನ ಈ ವಚನವನ್ನು ಯಾವ ರೀತಿ ಅರ್ಥೈಯಿಸುವುದು ತಿಳಿಯದು, ಶ್ರೇಣೀಕರಣವನ್ನೇ ಬೇರು ಸಹಿತ ಕಿತ್ತೊಗೆಯಲು ಶ್ರಮಿಸಿದ ಚಳುವಳಿಯಲ್ಲಿ ಅನೇಕ ವೈರುಧ್ಯಗಳಿವೆ.

'ಲಿಂಗವೆಂಬುದು ಕಾಯಕ ತೊಡಕು' ಎನ್ನುವ ಚೌಡಯ್ಯ ಇಲ್ಲಿ ಲಿಂಗಕ್ಕಿಂತ ಕಾಯಕ ನಿಷ್ಠೆಯೇ ಅಗತ್ಯ ಎಂಬ ವಾಸ್ತವಾಂಶವನ್ನು ಒತ್ತಿಹೇಳಿರುವನು. ಹಾಗೆಯೇ ನುಲಿಯ ಚಂದಯ್ಯನು ಕಾಯಕದಲ್ಲಿಯೇ ಮಹೋನ್ನತಿಯನ್ನು ಸಾಧಿಸಿದವನು. ಕಾಯಕದಲ್ಲಿ ತನ್ಮಯಗೊಂಡಾಗ ಕಳಚಿ ಬಿದ್ದ ಲಿಂಗವನ್ನು ಧರಿಸದೇ ನಡೆದು ಕೊನೆಯಲ್ಲಿ ಲಿಂಗವೇ ಆತನಲ್ಲಿ ತನ್ನನ್ನು ಧರಿಸು ಎಂದು ಪರಿಪರಿಯಿಂದ ಬೇಡಿಕೊಳ್ಳುವ ವಿಚಾರ ಕೆಳಸ್ತರದ ಜನಸ್ತೋಮವು ಲಿಂಗಕ್ಕಿಂತ ಕಾಯಕಕ್ಕೆ ಪ್ರಾಶಸ್ತ್ಯ ಕೊಟ್ಟಿರುವುದು ಎದ್ದು ಕಾಣುವುದು. 'ಇತ್ತಲೇಕಯ್ಯ ಕಾಯದ ತತ್ತಿಯ ಹೊತ್ತಾಡುವವನ ಮುಂದೆ' ಎನ್ನುವ ಮಾದಾರ ಧೂಳಯ್ಯನ ಪ್ರಶ್ನೆಯಲ್ಲಿ ವ್ಯಂಗ್ಯವಡಗಿದೆ. ಇಲ್ಲಿ ಕೆಳವರ್ಗಗಳ ಸಾಮಾಜಿಕ ಎಚ್ಚರ ಹಕ್ಕು ಪ್ರಶ್ನೆಗಳು ಬಲವತ್ತರವಾಗಿದ್ದು ಮಾತ್ರ ಖಚಿತ.

ವ್ಯವಸ್ಥೆಯ ಕೀಳರಿಮೆಗೊಳಗಾದ ಜನ ಸಮುದಾಯಕ್ಕೆ ವಚನ ಚಳುವಳಿ ಲಿಂಗದೀಕ್ಷೆ ನೀಡಿ ಸಮಾನತೆ ಮೆರೆದಿದ್ದೇನೋ ನಿಜವೆ. ಅದರೂ ಲಿಂಗದೀಕ್ಷೆ ಪಡೆದ ಮತಾಂತರಿ ಕೆಳವರ್ಗದ

ಜನಸ್ತೋಮ ವಾಸ್ತವತೆಯಲ್ಲಿ ಸ್ವಾತಂತ್ರ ಕಳೆದುಕೊಂಡು ಇತ್ತ ತಮ್ಮ ಆಚರಣೆಗಳನ್ನು ಬಿಡದೆ ಅತ್ತ ಮೇಲ್ವರ್ಗದ ಆಚರಣೆಗಳನ್ನು ಸಂಪೂರ್ಣವಾಗಿ ಒಪ್ಪದೇ ಇದ್ದ ಇಬಂದಿತನ ಕಣ್ಣಿಗೆ ಕಾಣುತ್ತದೆ.

## ೩.೪ ಭವಿ - ಭಕ್ತ ಸಂಬಂಧಗಳು

ಜಿಡ್ಡುಗಟ್ಟಿದ ಕಂದಾಚಾರ ಜಾತಿ ಕುಲಾಚಾರಗಳ ಸಾಮಾಜಿಕ ವೈಪರಿತ್ಯಗಳನ್ನೆಲ್ಲ ಕಿತ್ತೆಸೆಯಲು ಶರಣರು ಮಾಡಿದ್ದು ಜನತೆಯ ಮಾನಸಿಕ ಪರಿವರ್ತನೆ. ಈ ಪರಿವರ್ತನೆಗಾಗಿಯೇ ಬಸವಣ್ಣನಂತಹ ಶರಣರು ಭವಿಯೊಂದು ಕುಲ, ಭಕ್ತನೊಂದುಕುಲ ಎಂದು ಎರಡು ಕುಲ ಮಾಡಿದ್ದು, ಇದು ಹುಟ್ಟಿನಿಂದಾಗಲಿ, ಜಾತಿಯಿಂದಾಗಲಿ, ಲಿಂಗಭೇದದಿಂದಾಗಲಿ ಕಂಡು ಕೊಳ್ಳುವುದಲ್ಲ, ಮನೋಧರ್ಮ ದಿಂದ, ನಡೆ-ನುಡಿಗಳಿಂದ ಭವಿ-ಭಕ್ತ ಎಂದು ಭೇದಿಸುವದಾಗಿದ್ದು, ಇಲ್ಲಿ ವ್ಯಕ್ತಿ ವೈಯಕ್ತಿಕವಾಗಿ ತನ್ನನ್ನು ತಾನು ನೇರ್ಪಡಿಸಿಕೊಳ್ಳುವ ಶಿವಪಥವನ್ನು ಹಾಕಿಕೊಟ್ಟರು. ಮಾನವ ಜನಾಂಗದ ಐಕ್ಯತೆಯನ್ನು ಕೈಗೊಂಡ ಶರಣ ಸಮುದಾಯ ವರ್ಣಾಶ್ರಮದ ನಾಲ್ಕು ವರ್ಣಗಳನ್ನು ಕಿತ್ತೊಗೆದು ಭವಿ-ಭಕ್ತ ಎಂದು ವಿಂಗಡಿಸಿದರು.

ಭವದ ಬಂಧನದಲ್ಲಿ ಬಿದ್ದವ ಭವಿ. ಭವವ ಗೆದ್ದವ ಅನುಭವಿ, ಹುಟ್ಟು ಸಾವಿನ ಸೆಳವನ್ನು ಮಿರಿದವನೇ ಅನುಭವಿ, ಯಾರು ಸದ್ಗುಣ ಸಂಪನ್ನರೋ ಅವರೆ ಭಕ್ತರು. ದುರಾಚಾರ ದುರ್ಮಾರ್ಗಿಗಳಾದವರೆಲ್ಲ ಭವಿಗಳು ಎಂದು ಅರ್ಥೈಯಿಸಿವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನು ಒಂದೆ ಎಂಬೆ' ಎನ್ನುವಲ್ಲಿ ಶಿವಭಕ್ತನಾಗಿರುವುದು ಮುಖ್ಯ. ಶಿವಭಕ್ತನಾಗು ವದಕ್ಕಿಂತ ಮೊದಲು ಅವನು ಯಾವ ಸಾಮಾಜಿಕ ನೆಲೆಗೆ ಸೇರಿದವ ಯಾವ ವೃತ್ತಿ ಕೈಗೊಂಡಿದ್ದವ, ಯಾವ ಧರ್ಮದವ ಎಂಬುದನ್ನು ಇವರು ಗ್ರಹಿಸಲಿಲ್ಲ, ಅದಕ್ಕೆ ಬದಲಾಗಿ ಇಷ್ಟಲಿಂಗದ ಪರಿಕಲ್ಪನೆಯಲ್ಲಿ ಯಾವ ವೃತ್ತಿ ಕೈಗೊಂಡಿದ್ದರೂ ಅದು ಶುದ್ಧ ಪ್ರಾಮಾಣಿಕವಾಗಿದ್ದಾಗಿರಬೇಕು. ಈ ವಚನಾಂದೋಲನದ ಕಾಲದಲ್ಲಿ ಬೀಸಿದ ಈ ಹೊಸಗಾಳಿ ಅನೇಕ ಭವಿಗಳನ್ನು ಭಕ್ತರನ್ನಾಗಿಸುವ ಪ್ರಯತ್ನ ಮಾಡಿತು.

ಇತರ ಧರ್ಮಗಳಂತೆ ವಚನ ಧರ್ಮವೂ ಸಹ ಸತಿ-ಪತಿಗಳಲ್ಲಿ ಯಾರೆ ಭವಿಗಳಾಗಿರಲಿ ಭಕ್ತರ ಸಂಗದಲ್ಲಿ ಬಂದ ಬಳಿಕ ಅವರೂ ಭಕ್ತರಾಗಬೇಕೆಂದು ಅಪೇಕ್ಷಿಸುತ್ತದೆ. ಭವಿ ಸತಿಯರಿಗೆ ಭಕ್ತ ಪತಿಗಳು, ಭಕ್ತ ಸತಿಯರಿಗೆ ಭವಿ ಪತಿಗಳು ದೊರಕಿದ್ದು ತಮ್ಮ ತಮ್ಮ ಸಂಪರ್ಕದಿಂದ ತಿದ್ದಿದ ಕಥೆಗಳು ಬರುತ್ತವೆ.

''ನಾವದಿಗೆಯ ಗುಡ್ಡಮ್ಮ ಅಸ್ಪೃಶ್ಯಳು, ಆಕೆ ಭಕ್ತಳಾದ ಕಾರಣ ತಾನಿದ್ದ ಕೇರಿಯ ಬ್ರಾಹ್ಮಣರಿಂದ ತೊಂದರೆ ಗೀಡಾದಳು. ಸೂರಾಂಬೆ ಮಲ್ಲಿಕಾರ್ಜುನ ಪಂಡಿತನ ಶಿಷ್ಯೆ. ಭಕ್ತರಾದ ಅಂತ್ಯಜನರನ್ನು ಮನೆಗೆ ಕರೆದು ಉಪಚರಿಸಿದ್ದುದಕ್ಕಾಗಿ ಅರಸನಿಂದ ಸಂಕಟ್ಟಕ್ಕಿಡಾದಳು. ಸೋಹಳಿಯ ಸೋಮವ್ವೆ, ಪದ್ಮಾವತಿಯರು ಜೈನ ಮನೆತನದವರಾಗಿದ್ದರೂ ಭಕ್ತ ಜೀವನವನ್ನು ಅಪ್ಪಿಕೊಂಡ ಕಾರಣದಿಂದ ತೊಂದರೆಗಿಡಾದರು.''[೩೧] ತಮ್ಮ ಭಕ್ತಿ ನಮ್ರತೆ, ಶೀಲ ಚಾರಿತ್ರ್ಯಗಳಿಂದ ಇವರು ಪತಿಯಂದಿರನ್ನು ಭಕ್ತರನ್ನಾಗಿ ಮಾಡಿದ ಕಥೆಗಳು ಕಾಣದೊರೆಯುತ್ತವೆ.

ಭಕ್ತರಾಗಬೇಕಾದರೆ ಅಂತರಂಗ, ಬಹಿರಂಗ ಶುದ್ಧವಾಗಿರಬೇಕು. 'ಭಕ್ತ ಭಕ್ತೆಯರು ದೀಕ್ಷಿತರಾದ ಬಳಿಕ ತಮ್ಮ ಅಸಂಸ್ಕೃತ ರೀತಿ ನೀತಿಗಳನ್ನು ಸಂಸ್ಕರಿಸಿಕೊಳ್ಳುವುದು. ಪಶುಗುಣಗಳನ್ನು ತ್ಯಜಿಸಿ ಮಾನವರಾಗುವುದು ಮೊದಲ ಹಂತ. ಆ ಮೇಲೆ ಅವುಗಳನ್ನು ಛಲದಿಂದ ಪ್ರಾಣದಲ್ಲಿ ಅಳವಡಿಸಿಕೊಳ್ಳುವುದು ಎರಡನೆ ಹಂತ. ಮೂರನೆ ಹಂತದಲ್ಲಿ ತನ್ನ ಬಾಳು ಎಂಬುದು ಶಿವ ಪ್ರಸಾದವೆಂಬ ಕೃತಜ್ಞತಾ ಭಾವದಲ್ಲಿ ಎಚ್ಚರವಹಿಸಿ ನಡೆದುಕೊಳ್ಳವುದು. ಇವೆಲ್ಲ ತನ್ನ ಒಡನಾಟದೊಳಗಣ ವ್ಯವಹಾರದೊಂದಿಗೆ ನಡೆಯುತ್ತ ಹೋಗುವುದು.'[೩೨] ಈ ಮೂರು ಹಂತಗಳಿಂದ ಭಕ್ತ ಪರಿಪೂರ್ಣಗೊಂಡು ಮನಸ್ಸು ಕ್ರಿಯೆಗಳಲ್ಲಿ ಪ್ರಮಾಣಿಕತೆ ಕಂಡುಕೊಳ್ಳವುದು.

*'ಒಳಗೆ ಕುಟಿಲ ಹೊರಗೆ ವಿನಯವಾಗಿ*
*ಒಲ್ಲೆನೊಲ್ಲೆಯ್ಯ ಲಿಂಗವ*
*ಅವರು ಸತ್‌ಪಥಕ್ಕೆ ಸಲ್ಲರು ಸಲ್ಲರಯ್ಯ*
*ಒಳಹೊರಗೊಂದಾಗದವರಿಗೆ ಅಳಿಯಾಸೆ ವೇರಿ*
*ಬಿಸಾಡುವವರ ಜಗದೀಶ ಕೂಡಲಸಂಗಮ ದೇವ'*[೩೩]

ಎನ್ನುವ ಈ ವಚನವು ಭಕ್ತನ ಪೂರ್ವ ಸಿದ್ಧತೆಯ ನೆಲೆಗಳನ್ನು ವಿವರಿಸುತ್ತದೆ. ಭ್ರಷ್ಟಗೊಂಡವರು ಭಕ್ತರಲ್ಲ. ಭಕ್ತನಾಗಬೇಕಾದರೆ ತಮ್ಮ ಅಸ್ತಿತ್ವದ ನೆಲೆಗಳನ್ನು ಉತ್ತಮ ಪಡಿಸಿಕೊಳ್ಳುವುದು, ಶುದ್ಧಿಗೊಳಿಸಿಕೊಳ್ಳುವುದು ಮುಖ್ಯ. 'ಭಕ್ತಂಗೆ ಬಯಕೆ ಉಂಟೆ? ನಿತ್ಯಂಗೆ ಸಾವುಂಟೆ' ಎನ್ನುವ ಲಕ್ಕಮ್ಮ ಭಕ್ತನಾದವನಿಗೆ ಆಸೆ ಆಮಿಷಗಳು ಸಲ್ಲದು ಎಂಬ ನಿಷೇಧ ವ್ಯಕ್ತಗೊಳ್ಳುವುದು. 'ಆಸೆಯೆಂಬುದು ಅರಸಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ' ಎಂದು ತನ್ನ ಪತಿಯನ್ನೇ ತರಾಟೆಗೆಳೆದು ಅವಶ್ಯಕತೆಗಿಂತ ಹೆಚ್ಚಿನಲಾಭ ಸಲ್ಲದು ಎಂಬಂಶವನ್ನು ಸೂಚ್ಯವಾಗಿ ಹೇಳಿದ್ದಾಳೆ ಲಕ್ಕಮ್ಮ-ಲಕ್ಕಮ್ಮನಂತಹ ಶರಣೆಯರ ಭಕ್ತನ ಕುರಿತಾದ ನಿಲುವುಗಳು ಒಂದೇ ಬಗೆಯಾಗಿ ಕಂಡು ಬರುತ್ತವೆ.

'ತೊಬರನ ಕೊಳ್ಳಿಯಂತೆ ಉರಿವಾತ ಭಕ್ತನೇ? ಎಂದು ಪ್ರಶ್ನಿಸುವ ದಲಿತ ವರ್ಗದ ಮಹಿಳೆ ಕಾಳವ್ವೆಯ ಈ ಪ್ರಶ್ನೆಯಲ್ಲಿ ನೋವಿನ ತುಡಿತವಿದೆ. ಸುಳ್ಳಾಡುವಾತ, ಭಕ್ತನೆ ಕುಲವನೆತ್ತಿ ನಿಂದಿಸುವಾತ ಭಕ್ತನೆ? ಇಂತವರು ಕೋಟಿಜನ್ಮಗಳಲ್ಲೂ ಹಂದಿಗಳಾಗಿ ಹುಟ್ಟುತ್ತಾರೆ ಎಂದು ಹೇಳುವಲ್ಲಿ ಭಕ್ತನ ಇರುವಿಕೆಯನ್ನು ಸ್ಪಷ್ಟಪಡಿಸಿದ್ದಾಳಲ್ಲದೆ ತನ್ನ ಇನ್ನೊಂದು ವಚನದಲ್ಲಿ ಹೀಗೆ ವಿವರಿಸಿದ್ದಾಳೆ. 'ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ' ಕಾಯಕ ಕೃತ್ಯ ಮಾಡುವವನೇ ನಿಜವಾದ ಭಕ್ತನು. ಕಾಯಕದಿಂದ ಆಸೆಯ ಭವದ ಭೀಜವನ್ನು ಬಿತ್ತುವದಲ್ಲ, ಹೆಚ್ಚಿನ ಫಲಾಪೇಕ್ಷೆಯನ್ನು ಬಿಟ್ಟು ನಿತ್ಯ ಮುಕ್ತರಾಗಲು ಕಾಯಕವನ್ನು ಮಾಡಬೇಕು ಎಂದು ಅರ್ಥೈಯಿಸಿದ ಈ ವಚನದ ಧ್ವನಿ ಮಹತ್ವ ಪೂರ್ಣವಾದುದು.

ಭವಿಯ ಬಗ್ಗೆ ಪ್ರೀತ್ಯಾದಾರಗಳಿಲ್ಲದ ನಿಲುವನ್ನು ತೆಗೆದುಕೊಂಡ ಈ ವಚನ ಚಳುವಳಿ ಭಕ್ತಿಯನ್ನು ಶಿವಕೇಂದ್ರಿತವಾಗಿಸಿತು. ವ್ಯಕ್ತಿಯಲ್ಲಿ ಭಕ್ತಿಯ ಬೀಜ ಮತ್ತು ಬೆಳೆಯನ್ನು ಕಾಣಬಯಸಿದ ಈ ಚಳುವಳಿ ಭಕ್ತಿಯ ಖಾಸಗೀಕರಣ ಮತ್ತು ಕೇಂದ್ರಿಕರಣಗಳ ವೈರುಧ್ಯವನ್ನು ಒಡಲೊಳಗೆ ಇಟ್ಟುಕೊಂಡೆ ಬೆಳೆಯಿತು.

'ಭವಿಗೆಮೇಲು ವ್ರತ ಪುನರ್ದಿಕ್ಷೆಯಲ್ಲದೆ ಭಕ್ತಗುಂಟೆ' ಎನ್ನುವ ರಾಯಮ್ಮ ಭಕ್ತನಾದವನಿಗೆ ಯಾವ ವ್ರತದ ಹಂಗು ಬೇಕಿಲ್ಲ ಎಂಬುದನ್ನು ಸ್ಪಷ್ಟಪಡಿಸಿದಳು. ಶರಣರು ಭವಿ, ಭಕ್ತ ಪದವನ್ನು ಅವರು ಎಂದೂ ಜಾತಿವಾಚಕವಾಗಿ ಬಳಸದೆ ಗುಣವಾಚಕವಾಗಿಯೇ ಬಳಸಿರುವುದುಂಟು.

*'ಭವಿಯ ಕಳದೆವೆಂಬ ಮರುಳು ಜನಂಗಳು ನೀವು ಕೇಳಿರೋ*
*ಭವಿಯಲ್ಲವೇ ನಿಮ್ಮ ತನುಗುಣಾದಿಗಳು ಭವಿಯಲ್ಲವೇ*
*ನಿಮ್ಮ ಮನಗುಣಾದಿಗಳು? ಭವಿಯಲ್ಲವೇ ನಿಮ್ಮ ಪ್ರಾಣಗುಣಾ*
*ದಿಗಳು? ನಾನು ಭವಿಯ ಪೂಜಿಸಿ ಭವಂ ನಾಸ್ತಿಯಾದೆನು*
*ಗುಹೇಶ್ವರಾ'*[೩೪]

ಎಂದು ಅಲ್ಲಮಪ್ರಭು ನುಡಿಯುತ್ತಾನೆ. ಲಿಂಗ ಕಟ್ಟಿದ ಮಾತ್ರಕ್ಕೆ ಎಲ್ಲರೂ ಭಕ್ತರಾಗಿರಲಾರರು, ತನು-ಮನ-ಗುಣಾದಿಗಳು ಅಳಿಯದಿದ್ದರೆ ಅವರೆಲ್ಲರೂ ಭವಿಗಳೇ, ಭವಿಗಳ ಒಡನಾಟ ಈಚಲು ಮರದ ನೆರಳಿನಂತೆ ನಿರುಪಯುಕ್ತ, ಆದರೆ ಭಕ್ತರ ವಾಣಿ ಹೆಚ್ಚೇನು ಸವಿದಷ್ಟು ಸಿಹಿ, ಇವರ ಅಂತರ್ಮುಖಿ ನಿಷ್ಕಪಟಿ ಎಂಬ ನಿಲುವುಗಳನ್ನು ಕಾಣುತ್ತೇವೆ.

*'ಭವಿಯ ಬೆರಸಿದ ಭಕ್ತಿ, ಹವಿಯ ಬೆರಸಿದ ಬೀಜ*
*ಉದಕ ಬೆರಸದ ಎಣ್ಣೆ ಜ್ಯೋತಿ ಪ್ರಜ್ವಲಿಸುವುದೆ?*
*ಭವಿಯಲ್ಲ, ಭಕ್ತನಲ್ಲ, ಹವಿಯಲ್ಲ, ಬೀಜವಲ್ಲ, ಉದಕವಲ್ಲ, ಎಣ್ಣೆಯಲ್ಲ,*

*'ಒಡಲಿಚ್ಛೆಗೆ ಹೋಗಿ ಭವಿಯ ಮನೆಗೆ ತುತ್ತಿಡುವ*
*ನರಕಿಗಳಿಗೆ ಕೊಲಿವ ನಮ್ಮ ಶಂಭುಜಕ್ಕೇಶ್ವರಾ*[೩೫]

ಎಂದು ಪ್ರಶ್ನಿಸುವ ಸತ್ಯಕ್ಕ ಭವಿಯು ಅನುಪಯುಕ್ತ ಎಂಬುದನ್ನು ವಿವರಿಸಿರುವಳು.

*'ಗಂಡ ಶಿವಲಿಂಗ ದೇವರ ಭಕ್ತ*
*ಹೆಂಡತಿ ಮಾರಿ ಮಸಣೆಯ ಭಕ್ತೆ*
*ಹೆಂಡತಿ ಕೊಂಬುದು ಸುರೆಮಾಂಸ*
*ಗಂಡಕೊಂಬುದು ಪಾದೋದಕ ಪ್ರಸಾದ*
*ಭಾಂಡ-ಭಾಜನ ಶುದ್ಧವಿಲ್ಲದವರ ಭಕ್ತಿ*
*ಹೆಂಡದ ಮಡಕೆಯ ಹೊರಗೆ ತೊಳೆದಂತೆ*
*ಕೂಡಲಸಂಗಮದೇವಾ*[೩೬]

ಇಲ್ಲಿ ಭವಿಯಾದವರು ಸುರೆ-ಮಾಂಸಗಳನ್ನು ಆಹಾರದ ಪರಿಕರಗಳಾಗಿ ಬಳಸಿದರೆ ಭಕ್ತರು ಮಾಂಸಾಹಾರ ಮತ್ತು ಸುರೆಯಂತ ಪಾನೀಯಗಳನ್ನು ಬಳಸುವಂತಿಲ್ಲ. ಸತಿ, ಪತಿಗಳೊಂದಿಗಿರ ಬೇಕು ಎಂಬಂಶವನ್ನು ಈ ವಚನ ಅರ್ಥೈಯಿಸುವದು. ಇಲ್ಲಿ ಸತಿ-ಪತಿಗಳ ಅನ್ಯೋನ್ಯತೆಯಿಂದ ಕೂಡಿದ ಇಹ-ಪರಗಳ ಸಮನ್ವಯ ಸಾಧನೆಯೇ ಭಕ್ತಿಯ ಸೋಪಾನವಾಗಿದೆ. ಮೇಲಿನ ವಚನದಲ್ಲಿ ಸಿಡಿಮಿಡಿಗೊಳ್ಳುವ ಮನೋಭಾವ ಎದ್ದುತೋರಿದರೆ ಇಲ್ಲಿ ಈ ವಚನ

*'ಎಡದ ಕೈಯಲ್ಲಿ ಕತ್ತಿ, ಬಲದ ಕೈಯಲ್ಲಿ ಮಾಂಸ*
*ಬಾಯಲ್ಲಿ ಸುರೆಯ ಗಡಿಗೆ ಕೊರಳಲ್ಲಿ ದೇವರಿರಲಿ*
*ಅವರ ಲಿಂಗನೆಂಬೆ, ಸಂಗನೆಂಬೆ*[೩೭]

ಎನ್ನುವಲ್ಲಿ ಭಕ್ತನಾದವನು ಸುರೆ-ಮೌಂಸಾದಿಗಳನ್ನು ಬಳಸಕೂಡದು ಅದು ಭಕ್ತನಿಗೆ ತಿರಸ್ಕೃತ ಎನ್ನುವ ಭಾವನೆಯಲ್ಲಿ ಸಡಿಲತೆ ತೋರಿ ಹೊಂದಾಣಿಕೆ ಮಾಡಿಕೊಂಡ ರೀತಿ ಎದ್ದುಕಾಣುವುದು.

*'ಬಸವನ ಭಕ್ತಿ ಕೊಟ್ಟಣದ ಮನೆ*
*ಸಿರಿಯಾಳನ ಭಕ್ತಿ ಕಸಬುಗೇರಿ*
*ಸಿಂಧು ಬಲ್ಲಾಳನ ಭಕ್ತಿ ಪರದಾರ ದ್ರೋಹ*
*----- ಚೆನ್ನಮಲ್ಲಿಕಾರ್ಜುನ ನಿರ್ವಯಲಾದ ಕಾಣಾ*[೩೮]

ಎಂದು ಅಕ್ಕಮಹಾದೇವಿಯು ಈ ವಚನದಲ್ಲಿ ಉತ್ತಮ ಹೆಸರಿನಲ್ಲಿ ಹೆಂಡತಿಯನ್ನು ಅನ್ಯರಿಗೆ ಕೊಡುವುದು ನೀತಿಯಲ್ಲ ಅದು ಭಕ್ತಿಯ ವಿಧಾನವು ಅಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾಳೆ.

ಹನ್ನೆರಡನೇ ಶತಮಾನದ ವ್ಯವಸ್ಥೆಯಲ್ಲಿ ಸಮತೆಯನ್ನು ತರಲೆಂದೇ ಈ ಭವಿ-ಭಕ್ತ ಭೇದ ಮಾಡಿದರು. ಆದರೆ ವ್ಯವಸ್ಥೆಯ ಒಂದು ಭಾಗವಾದ ಭವಿ ಜನಾಂಗವನ್ನು ತೀರ ನಿಕೃಷ್ಟವಾಗಿ ಕಂಡಿರಲಿಕ್ಕೆ ಸಾಕು. ಬಸವಾದಿ ಪ್ರಮಥರೇ ಭವಿಗಳ ಮೇಲೆ ಕೋಪತಾಳಿದ್ದು ಅವರು ಎಂದಿಗೂ ಭಕ್ತರಾಗುವುದೇ ಇಲ್ಲ ಎಂಬ ಖಚಿತತೆ ಕಂಡುಕೊಂಡೆ ಈ ವಚನ ಹೇಳಿರಬಹುದು.

*'ಬೆಲ್ಲದ ನೀರೆರೆದಡೆನು ಬೇವು ಸಿಹಿಯಪ್ಪುದೇ?*
*ಕತ್ತುರಿಯ ಲೇಪ ವಿತ್ತಡೇನು, ನಿರುಳ್ಳಿಯ ದುರ್ಗಂಧ ದೂರವಪ್ಪುವೆ?*
*ಕಸುಗಾಯಿ ಹಿಸುಕಿದೊಡೇನು ಹಣ್ಣಗೆ ಹವಣಾವಪ್ಪುದೇ?*
*ಕೂಡಲಸಂಗಮದೇವ*[54]

ಎನ್ನುವಲ್ಲಿ ಭವಿಯಾದವನಿಗೆ ಯಾವ ಮಾರ್ಗದರ್ಶನ ನೀಡಿದರೂ ಏನೂ ಬೋಧೆ ಹೇಳಿದರೂ ವ್ಯರ್ಥ. ಭವಿಯಾದವನು ಎಂದೂ ಭಕ್ತನಾಗಲಾರ ಎಂಬುದು ಇವರ ಮನೋ ನಿರ್ಧಾರ. ಬಹುಶಃ ಈ ಭವ-ಭಕ್ತ ಭೇದವಿಲ್ಲದೆ ಸಮಾಜವನ್ನು ಒಟ್ಟಾಗಿ ಗ್ರಹಿಸಿದ್ದರೆ ಈ ಭೇದಕಂಡು ಬರುತ್ತಿರಲಿಲ್ಲವೆನೋ ಎನಿಸುವುದು.

ವಚನ ಚಳುವಳಿ ಮಾನವ ಕಲ್ಯಾಣ ಬಯಸಿದರೂ ಅದರಲ್ಲೂ ಶ್ರೇಣೀಕರಣ ಮಾಡಿದ ವಿವರ ಚರ್ಚೆಯಿಂದ ತಿಳಿಯುತ್ತದೆ. ಭಕ್ತನಾಗಬೇಕಾದವನಿಗೆ ಕೆಲವೊಂದು ಕಟ್ಟುಪಾಡುಗಳನ್ನು ತೊಡಿಸುವ ಮೂಲಕ ಭವಿಯಾದವನನ್ನು ತುಚ್ಛೀಕರಿಸಲಾಯಿತು. 'ವ್ರತಹೀನನರಿದು ಕೂಡಿದರೆ ಕಿವಿ ಮೂಗಕೊಯ್ಯುವರು ನಾನೊಲ್ಲೆ ನಿರ್ಲಜ್ಜೇಶ್ವರಾ' ಎನ್ನುವ ಸೂಳೆ ಸಂಕವ್ವೆಯ ಈ ಮಾತು ಅವಳ ವೃತ್ತಿಯ ಸ್ವಚ್ಛಂದತೆಗೆ ಬಂದ ಪ್ರತಿಬಂಧವನ್ನು ಗ್ರಹಿಕೆಗೆ ತರುತ್ತದೆ. ಇದರಿಂದ ಭವಿಯಾಗುಳಿದವರನ್ನು ಈ ಚಳುವಳಿ ನಡೆಸಿಕೊಂಡ ರೀತಿ ಗೊತ್ತಾಗುತ್ತದೆ.

ಭಕ್ತನನ್ನು ವ್ರತಪ್ರಧಾನವಾಗಿ ಗ್ರಹಿಸುವ ನೆಲೆಗಳು ವಚನ ಚಳುವಳಿಯಲ್ಲಿ ಒಂದು ಪ್ರಧಾನ ಆಶಯಗಳಾಗಿ ಕಂಡರೂ ಕೆಳವರ್ಗದ ವಚನಕಾರರಲ್ಲಿ ಇದು ಮಸುಕಾಗಿ ಕಾಣುವುದು ಅಷ್ಟೇ ಮುಖ್ಯವಾದ ಸಂಗತಿಯೂ ಹೌದು, ವಿಶೇಷವಾಗಿ ರೆಮ್ಮವ್ವೆ ಬಾಚಿ ಕಾಯಕದ ಬಸವಪ್ಪಯ್ಯಗಳ ಪುಣ್ಯಸ್ತ್ರೀ ಕಾಳವ್ವೆ, ಸಂಕವ್ವೆಯರಲ್ಲಿ ವೃತ್ತಿನೇಮಗಳಿಗಿಂತ ಕ್ರಿಯೆ ಬಹು ಮುಖ್ಯವಾಗಿ ಕಾಣುತ್ತದೆ. ಬದುಕಿಗೆ ಶಾಸ್ತ್ರಕ್ಕಿಂತ ಕ್ರಿಯೆ ಮತ್ತು ಅರಿವು ಬಹುಮುಖ್ಯವೆಂದು ಇವರ ಆಶಯ. ಎಡದ ಕೈಯಲ್ಲಿ ಕತ್ತಿ, ಬಲದ ಕೈಯಲ್ಲಿ ಮಾಂಸ ಎನ್ನುವ ಚಿತ್ರಗಳನ್ನು ಬಸವಣ್ಣ ಒಂದು ಹಂತದಲ್ಲಿ ಒಪ್ಪಿಕೊಳ್ಳುವ ಸಂಗತಿಗಳನ್ನು ನೋಡಿದರೆ ಈ ಚಳುವಳಿಯ ಸೈದ್ಧಾಂತಿಕತೆಯ ಬಗ್ಗೆ ಗುಮಾನಿ ಹುಟ್ಟುತ್ತದೆ. ಶರಣ ಚಳುವಳಿಯಲ್ಲಿ ಸೇರ್ಪಡೆಯಾದ ಬಹಳಷ್ಟು ಕೆಳವರ್ಗಗಳು ತಮ್ಮ ಮೂಲ ಪ್ರವೃತ್ತಿಯಲ್ಲಿಯೇ ಉಳಿದದ್ದನ್ನು ನೋಡಿದರೆ, ಚಳುವಳಿ ವ್ರತ ನೇಮಗಳಿಗಿಂತ ಭಿನ್ನವಾದ ಸರಳ ಹಾಗೂ ಸಾಮಾನ್ಯವಾದ ಆಧ್ಯಾತ್ಮಿಕ ಹಾದಿಯನ್ನು ಹುಡುಕಿಕೊಂಡಿದ್ದು ಸ್ಪಷ್ಟವಾಗುತ್ತದೆ.

## ೩.೫. ಲಿಂಗಭೇದ

ಹೆಣ್ಣಿಗೆ ಅಧ್ಯಾತ್ಮ ಸ್ಥಾನ ಕೊಟ್ಟರೆಂದು ವಚನಾಧ್ಯಯನಗಳೂ ವೈಭವೀಕರಿಸಿ ಹೇಳುತ್ತವೆ. ಹೆಣ್ಣನ್ನು ಜೈವಿಕ ನೆಲೆಯಲ್ಲಿ ಹೆಣ್ಣೆಂದು ಭಾವಿಸುವ ಪರಿ ಬೇರೆ ಆದರೆ ಹೆಣ್ಣು ಗಂಡೆಂಬ ಮೇಲು ಕೀಳಿನ ಸಂದರ್ಭದಲ್ಲಿ ಹೆಣ್ಣನ್ನು ತೀರನಿಕೃಷ್ಟವಾಗಿ ನಿಸ್ಸಾಯಕಳಾಗಿ, ಮೈಲಿಗೆಯ ಸಂಕೇತವಾಗಿ ಕೀಳಿಕರಣಗೊಳಿಸಿದ್ದು ಚರಿತ್ರೆಯಿಂದ ತಿಳಿದು ಒರುತ್ತದೆ. ಶರಣಚಳುವಳಿಯ ಸಂದರ್ಭದಲ್ಲಿ ಹೆಣ್ಣಿಗೂ ಆಧ್ಯಾತ್ಮಿಕ ಸ್ವಾತಂತ್ರ್ಯ- ವ್ಯಕ್ತಿ ಸ್ವಾತಂತ್ರ, ಹಾಗೂ ಅಭಿವ್ಯಕ್ತಿ ಸ್ವಾತಂತ್ರದಕ್ಕಿದರೂ ವಚನ ಚಳುವಳಿಯಲ್ಲಿರುವ ಅಂತರಿಕ ದ್ವಂದ್ವಗಳೂ ಹೆಣ್ಣಿನ ಆಧ್ಯಾತ್ಮಿಕ ಅಸಮಾನತೆಯ ಸಂಗತಿಗಳನ್ನು ಅನುಮಾನದಿಂದ ನೋಡಲು ಪ್ರೇರೆಪಿಸುತ್ತವೆ. ಉಪೇಕ್ಷಿತ ಅಧ್ಯಯನದ ನೆಲೆಗಳಿಗೆ ಒತ್ತು ಬೀಳುತ್ತಿರುವ ಇಂದಿನ ಸಂದರ್ಭದಲ್ಲಿ ಚಳುವಳಿಯೊಂದನ್ನು ಅಮೂಲಾಗ್ರವಾಗಿ ಆದರ್ಶಿಕೃತ ನೆಲೆಯಲ್ಲಿ ಪರಿಭಾವಿಸದೆ ಅದರ ಆಂತರಿಕ ಜಾಡಿನಲ್ಲಿ ಅಧ್ಯಯನಿಸುವುದು ಹೆಚ್ಚು ಸೂಕ್ತ ಎನಿಸುತ್ತದೆ.

ಇಡೀ ವಚನ ಚಳುವಳಿಯನ್ನು ಅದರಲ್ಲೂ ಮಹಿಳಾ ವಚನಕಾರ್ತಿಯರನ್ನು ಚಳುವಳಿಯ ಪೂರ್ಣ ದೃಷ್ಟಿಯಿಂದ ನೋಡಿದಾಗ ಮಹಿಳಾ ವಚನಕಾರ್ತಿಯರಿಗಿದ್ದ ಹಲವಾರು ಆಯಾಮಗಳು ಕಳೆದು ಹೋಗುವ ಸಾಧ್ಯತೆಗಳು ಇರುತ್ತವೆ. ಊಳಿಗಮಾನ್ಯ ಪರಿಸರದಿಂದಲೇ ತಮ್ಮ ರೂಪಾಕಾತ್ಮಕತೆಯನ್ನು ಆಯ್ದುಕೊಳ್ಳುವ ಶರಣ ಬದುಕನ್ನು ವೈಭವೀಕರಿಸುವ ಹಂಬಲದಲ್ಲಿಯೇ ಹಲವಾರು ಶಂಕೆಗಳಿಗೆ ಗರಿಮೂಡುತ್ತವೆ. ಭಕ್ತಿಯನ್ನು ಖಾಸಗೀಕರಿಸುವ ಶಿವಕೇಂದ್ರಿತ ಚಿಂತನೆಯಿಂದ ನೋಡುವ ಆಳು ಒಡೆಯರ ಸಂಬಂಧದಲ್ಲಿ ಗ್ರಹಿಸುವ ಮಾದರಿಗಳು ಇದಕ್ಕೆ ಒಳ್ಳೇಯ ನಿದರ್ಶನಗಳು. ಬಹು ಮುಖ್ಯವಾಗಿ ಅಕ್ಕಮಹಾದೇವಿ, ರೆಮ್ಮವ್ವೆ, ಕಾಳವ್ವೆ, ನೀಲಮ್ಮನಂತಹ ಕೆಲವೊಂದು ವಚನಕಾರ್ತಿಯರನ್ನು ಹೆಸರಿಸುವದರ ಮೂಲಕ ಹೆಣ್ಣಿಗೆ ನೀಡಿದ ಆಧ್ಯಾತ್ಮಿಕ ಸ್ಥಾನವನ್ನು ಎತ್ತಿ ತೋರಿಸಲಾಗುತ್ತದೆ. ಆದರೆ ಬಹಳಷ್ಟು ಸಲ ಪುರುಷ ಕೇಂದ್ರಿತ ನೆಲೆಯಿಂದಲೇ ಹೆಣ್ಣಿನ ಆಧ್ಯಾತ್ಮಿಕ ಸ್ಥಾನಮಾನಗಳನ್ನು ನಿರೂಪಿಸಲಾಗುತ್ತದೆ. ಸೂಳೆಯ ಮಗ ಮಾಳವ ಮಾಡಿದಡೆ ತಾಯಿ ಹೆಸರಾಯಿತ್ತು ತಂದೆ ಹೆಸರಲ್ಲ' ಎನ್ನುವಲ್ಲಿ ತಂದೆಯ ಮೂಲಕವೇ ಮಗನ ಸಂಬಂಧವನ್ನು ಗುರುತಿಸುವ ಪ್ರಯತ್ನದಲ್ಲಿ ಹಾದರ ಕಾಯಕದ ಗಂಗಮ್ಮ ಸೂಳೆ ಸಂಕವ್ವ ಇವರಂತಹ ವೃತ್ತಿ ನಿರತ ಮಹಿಳೆಯರನ್ನು ಎಲ್ಲಿಟ್ಟು ನೋಡುವುದು? ಹಾದರವನ್ನು ತಡೆಗಟ್ಟುವ ವಿಧಾನವಿದು ಎಂದು ಸಮರ್ಥಿಸಿಕೊಳ್ಳಬಹುದಾದರೂ

ಕೆಳವರ್ಗಗಳ ಬೆರಣಿಯ ಕೂಟದಲ್ಲಿ ತನ್ನ ಹುಟ್ಟನ್ನು ಗುರುತಿಸಿಕೊಳ್ಳುವ ವಚನಕಾರರ ಅಪವರ್ಗೀಕರಣದ ನೆಲೆಗಳನ್ನು ತಿಳಿವ ಬಗೆ ಯಾವುದು? ಸೂಳೆಗೆ ಹುಟ್ಟಿದ ಕೂಸಿನಂತೆ ಅಯ್ಯ ಅಯ್ಯಾ ಎಂದು ಕರೆಯಲಾರೆ ಎಂದು ಬಿಡೆಯಿಲ್ಲದೆ ವಚನಕಾರರು ಹೇಳುತ್ತಾರೆ. 'ಪರಮ ಪತಿವ್ರತೆಗೊಬ್ಬನೆ ಗಂಡ' ಎನ್ನುವ ವಚನಕಾರರಿಗೆ ಇಬ್ಬರು ಹೆಂಡರು ಇದ್ದರು ಎಂಬುದು ಮುಂದೆ ಬರುವದಿಲ್ಲ.

*'ಕೂಸುಳ್ಳ ಸೂಳೆ ಧನದಾಸೆ ಗೊತ್ತೆಯ ಕೊಂಡಡೆ*
*ಕೂಸಿಂಗಲ್ಲ, ಬೊಜಗಂಗಲ್ಲ ಕೂಸನೊಮ್ಮೆ ಸಂತವಿಡುವಳು*
*ಬೊಜಗನೊಮ್ಮೆ ನೆರೆವಳು, ಧನದಾಸೆ ಬಿಡದು*
*ಕೂಡಲ ಸಂಗಮದೇವಾ'*[೩೦]

ಸೂಳೆಯಾದವಳಿಗೆ ಬದುಕಿನ ನಿರ್ವಹಣೆಗೆ ಹಣವೇ ಮುಖ್ಯ ದೈಹಿಕ ದುಡಿಮೆಗೆ ಬೆಲೆ ತಂದು ಕೊಟ್ಟ ವಚನಕಾರರು ದೈಹಿಕ ದುಡಿಮೆಯ ಈ ವೃತ್ತಿಯನ್ನು ಕಡೆಗಣಿಸಿದ್ದು ಹೇಗೆ? ಪುರುಷವಾದಿಗಳಂತೆ ಕಾಣುವ ವಚನಕಾರರ ಈ ಆಶಯಗಳು ಕೆಳವೃತ್ತಿಗಳ ಹೆಣ್ಣನ್ನು ವಿದ್ರೋಹದ ಪ್ರತಿಮೆಗಳನ್ನಾಗಿ ಪರಿಭಾವಿಸುತ್ತವೆ. ಗಂಡಿನ ನಿಷ್ಠೆಯ ಚೌಕಟ್ಟಿನಾಚೆಗಿರುವ ಹೆಣ್ಣನ್ನು ವಿವಾಹೇತರ ಸಂಬಂಧಗಳ ಮೂಲಕ ಗುರುತಿಸುವ ಈ ಪರಿ ವಿಚಿತ್ರವೆನಿಸುತ್ತದೆ. ಭಕ್ತಿ ಪ್ರವಾಹದಲ್ಲಿ ಲಿಂಗಾತೀತವಾಗಿ ತಮ್ಮನ್ನು ಗುರುತಿಸಿದರು ಹೆಣ್ಣನ್ನು ದೌರ್ಬಲ್ಯದ ಲಕ್ಷಣವಾಗಿ ಗಂಡಸುತನವನ್ನು ಸಾಮರ್ಥದ ಕುರುವಾಗಿ ಮಾಡಿದ ಸಂದರ್ಭವದು.

ಬಹಳ ವಿಚಿತ್ರವೆಂದರೆ ಅಲಕ್ಷಿತ ವರ್ಗದ ವಚನಕಾರ್ತಿಯರ ಧೋರಣೆ ಇದಕ್ಕಿಂತ ಭಿನ್ನವಾಗಿರುವದನ್ನು ಗಮನಿಸಬಹುದು. 'ಕೂಟಕ್ಕೆ ಸತಿಪತಿಯೆಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ' ಎನ್ನುವ ಅಯ್ದಕ್ಕಿ ಲಕ್ಕಮ್ಮ ಹೆಣ್ಣು ಗಂಡುಗಳ ಮಧ್ಯದ ನಿಸರ್ಗ ಸಹಜ ಭೇದವನ್ನು ತೆರೆದಿಡುತ್ತಾಳೆ. ಅವಳ ಮಾತಿನಲ್ಲಿ ಜೈವಿಕ ಲಿಂಗಭೇದವು ಕ್ರಿಯೆಯ ಮಟ್ಟದಲ್ಲಿ ಮಾತ್ರ ಇರುವಂತಹದ್ದು, ಅರಿವಿನ ಸಂದರ್ಭದಲ್ಲಿ ಆ ಸಂಬಂಧ ಅಭೇದವಾಗಿ ಕಾಣುತ್ತದೆ. 'ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಹೀವಂಗೆ' ಎನ್ನುವ ಮಾತುಗಳು ಹೆಣ್ಣು-ಗಂಡಿನ ಲಿಂಗಭೇದವನ್ನು ಕಡೆಗಣಿಸಿ ದೈಹಿಕ ದೌರ್ಬಲ್ಯವನ್ನು ಜೈವಿಕ ಭೇದವನ್ನು ಏಕಕಾಲಕ್ಕೆ ಸಿಗುವ ಸಂಗತಿಗಳಾಗಿ ತೋರುತ್ತವೆ.

ಯೋನಿ ಪಾವಿತ್ರ, ಸಂಪತ್ತಿನೊಂದಿಗಿನ ಸಮೀಕರಣ, ಅಬಲೆ, ಅಸಮರ್ಥೆ ಎಂದು ಹೆಣ್ಣಿನ ಬಗೆಗಿನ ವಿಶೇಷಣಗಳು ಮೇಲು ಮತ್ತು ಮಧ್ಯಮ ವರ್ಗದ ಸ್ತರಗಳಲ್ಲಷ್ಟೇ ಇದ್ದಂತೆ ಕಾಣುತ್ತದೆ.

ಆಯ್ದಕ್ಕಿ ಲಕ್ಕಮ್ಮ ಮೋಳಿಗೆ ಮಹಾದೇವಿ, ಲಿಂಗಮ್ಮ, ಮುಕ್ತಾಯಕ್ಕ, ಮುಂತಾದ ಶ್ರಮ ಸಮುದಾಯದ ಶರಣರಲ್ಲಿ ಈ ಭೇದ ಕಂಡುಬರುವುದಿಲ್ಲ. ಶ್ರಮ ಸಮುದಾಯದ ಚರಿತ್ರೆಯನ್ನು ಅವಲೋಕಿಸಿದಾಗ ಹೆಣ್ಣು ನಿಕೃಷ್ಟವಾಗಿ ಕಂಡ ವಿವರಗಳು ಕಡಿಮೆ. ಅಲ್ಲಿ ವೈಧಿಕ ಚಿಂತನೆಗಳಿಗಿಂತ ಬೇರೆಯಾದ ಸಾಂಸ್ಕೃತಿಕ ಚಹರೆಗಳನ್ನು ಕಾಣುತ್ತೇವೆ. ಆತ್ಮವಿಶ್ವಾಸದ ಪ್ರತೀಕಳಾಗಿ, ದಿಟ್ಟಳಾಗಿ, ಕ್ರಿಯಾ ಶೀಲವಾಗಿ, ಸಾಂಸ್ಕೃತಿಕ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವದನ್ನು ಕಾಣುತ್ತೇವೆ. ಇದಕ್ಕೆ ಹಾದರ ಕಾಯಕದ ಗಂಗಮ್ಮ, ಸೂಳೆ ಸಂಕವ್ವೆಯಂತಹ ಸ್ತ್ರೀಯರು ಒಳ್ಳೆಯ ನಿದರ್ಶನಗಳು.

**ಅಡಿ ಟಿಪ್ಪಣಿಗಳು**

೧. ಪಿ.ವಿ.ನಾರಾಯಣ, ಪುಟ-೧೪೦ ವಚನ ನಿರ್ವಚನ

೨. ಜಿ.ಎಸ್.ಶಿವರುದ್ರಪ್ಪ ಪು-೫೧ ವಿಸ್ತರಣ

೩. ವೀರೇಶ, ಬಡಿಗೇರ ಪು-೨೩೭ ಉತ್ತರ ಕರ್ನಾಟಕದ ಜಾನಪದ ಗೀತೆಗಳ ಒಂದು ಸಾಂಸ್ಕೃತಿಕ ಅಧ್ಯಯನ

೪. ಮ.ನ.ಜವರಯ್ಯ, ಪು-೨೮೭ ದಲಿತ ವರ್ಗದ ಶರಣನು ಮತ್ತು ಶರಣೆಯರು ಒಂದು ಅಧ್ಯಯನ

೫. ವೀರಣ್ಣ, ರಾಜೂರ (ಸಂ) ಸಮಗ್ರ ವಚನ ಸಂಪುಟ ೫

೬. ಬಿ.ಆರ್.ಹಿರೇಮಠ (ಸಂ) ಸಮಗ್ರವಚನ ಸಂಪುಟ-೮ ಪು-೩೭೦ ವ-೨೧೪೦

೭. ಬರಗೂರು ರಾಮಚಂದ್ರಪ್ಪ (ಸಂ) ಪು-೩೨ ವಚನ ಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ

೮. ವೀರಣ್ಣ, ರಾಜೂರ (ಸಂ) ಸಮಗ್ರ ವಚನ ಸಂಪುಟ ೫ ಪು-೧೪೩ ವ-೪೪೬

೯. ---,,--- ಪು-೧೫೭ ವ-೪೯೭

೧೦. --,,-- ಪು-೧೮೨ ವ- ೫೬೪

೧೧. ಎಂ.ಎಂ.ಕಲಬುರ್ಗಿ (ಸಂ) ಸಮಗ್ರ ವಚನ ಸಂಪುಟ-೧ ಪು-೧೫೪ ವ-೬೧೪

೧೨. ಎಂ.ಎಂ.ಕಲಬುರ್ಗಿ (ಸಂ) ಸಮಗ್ರ ವಚನ ಸಂಪುಟ-೬ ಪು-೩೯೪ ವ-೧೨೨೨

೧೩. ಪಿ.ವಿ.ನಾರಾಯಣ, ಪು-೧೬೪ ವಚನ ನಿರ್ವಚನ

೧೪. ಎಂ.ಎಂ ಕಲಬುರ್ಗಿ (ಸಂ) ಸಮಗ್ರ ವಚನ ಸಂಪುಟ-೬ ಪು-೩೯೮ ವ-೧೨೩೪

೧೫. ಶೈಲಜಾ ಉಡಚಣ ಪು-೩ ವಚನಗಳಲ್ಲಿ ಸತಿ ಪತಿ ಭಾವ

೧೬. ಎಂ.ಎಂ.ಕಲಬುರ್ಗಿ (ಸಂ) ಸಮಗ್ರ ವಚನ ಸಂಪುಟ-೬ ಪು-೮೩ ವ-೨೫೮

೧೭. ---,,--- ಸಂಪುಟ-೧ ಪು-೧೨೧ ವ-೫೦೪

೧೮. --,,-- ಪು-

೧೯. ಷಣ್ಮುಖಯ್ಯ ಅಕ್ಕೂರಮಠ (ಸಂ) ಪು-೨೭೦ ವಚನಕಾರ ಪ್ರಮುಖ ಪರಿಕಲ್ಪನೆಗಳು

೨೦. ಎಂ.ಎಂ.ಕಲಬುರ್ಗಿ (ಸಂ) ಸಮಗ್ರ ವಚನ ಸಂಪುಟ-೬ ವ- ಪು-

೨೧. ---"--- ಪು-೫೬ ವ-೧೬೮

೨೨. ---"--- ಪು-೩೯ ವ-೧೧೭

೨೩. ರಹಮತ್ ತರಿಕೆರೆ, ಪು-೮೯ ಮರದೊಳಗಣ ಕಿಚ್ಚು

೨೪. ಶೈಲಜಾ ಉಡಚಣ, ಪು-೧೫೫, ವಚನಕಾರ ದೃಷ್ಟಿಯಲ್ಲಿ ಸ್ತ್ರೀ

೨೫. ವೀರಣ್ಣ ರಾಜೂರ (ಸಂ) ಸಮಗ್ರ ವಚನ ಸಂಪುಟ-೫ ಪು-೨೧೦ ವ-೬೬೪

೨೬. ಜಾನ ಟೀಟರ್ ಶೌಟನ ಶೌಬನ(ಮೂಲ) ಟಿ.ಆರ್.ಚಂದ್ರಶೇಖರ (ಅನು) ಪು-೨೧೫ ಅನುಭಾವಿಗಳ ಕ್ರಾಂತಿ

೨೭. ಶೈಲಜಾ ಉಡಚಣ, ವಚನಕಾರರ ದೃಷ್ಟಿಯಲ್ಲಿ ಸ್ತ್ರೀ, ಪು-೩೩೩

೨೮. ----------------,,---------------

೨೯. ಬಿ.ವ್ಹಿ.ಮಲ್ಲಾಪುರ, (ಸಂ) ಸಮಗ್ರ ವಚನ ಸಂಪುಟ-೩ ಪು-೧೫೪ ವ-೬೨೭

೩೦. --------------------,,-------------------

೩೧. ಶೈಲಜಾ ಉಡಚಣ, ಪು-೧೨೩ ವಚನಕಾರರ ದೃಷ್ಟಿಯಲ್ಲಿ ಸ್ತ್ರೀ

೩೨. ----,,----- ಪು-೨೮೪ ---,,----

೩೩. ಎಂ.ಎಂ ಕಲಬುರ್ಗಿ (ಸಂ) ಸಮಗ್ರ ವಚನ ಸಂಪುಟ ೧, ಪು-೨೭ ವ-೬೬

೩೪. ------,,--- ಸಂಪುಟ-೨ ವ-೩೮೧ ಪು-೧೧೦

೩೫. ವೀರಣ್ಣರಾಜೂರ (ಸಂ) ಸಮಗ್ರ ವಚನ ಸಂಪುಟ ೫, ವ-೯೭೮ ಪು-೩೧೫

೩೬. ಎಂ.ಎಂ.ಕಲಬುರ್ಗಿ (ಸಂ) ಸಮಗ್ರ ವಚನ ಸಂಪುಟ-೧ ವ-೧೦೪ ಪು-೨೯

೩೭. ---,,----- ವ-೭೨೦ ಪು-೧೮೦

೩೮.ವೀರಣ್ಣ ರಾಜೂರ (ಸಂ) ಸಮಗ್ರ ವಚನ ಸಂಪುಟ-೫ ವ-೨೪೮ ಪು-೭೭

೩೯. ಎಂ.ಎಂ.ಕಲಬುರ್ಗಿ (ಸಂ) ಸಮಗ್ರ ವಚನ ಸಂಪುಟ-೧ ವ-೧೪೪೬ ಪು-೫೨೦

೪೦. -----,,-- ವ-೧೦೧ ಪು-೨೯

ಅಧ್ಯಾಯ ೪

# ಅಲಕ್ಷಿತ ವಚನಕಾರ್ತಿಯರ ಧೋರಣಾತ್ಮಕ ಮತ್ತು ಪ್ರಗತಿಗಾಮಿ ನಿಲುವುಗಳು

ಅಲಕ್ಷಿತರೆಂದು ಗುರುತಿಸಲ್ಪಡುವ ವಚನಕಾರ್ತಿಯರ ಹೆಸರೇ ಸೂಚಿಸುವಂತೆ ಕದಿರೆ ಕಾಯಕದ ರೆಮ್ಮವ್ವೆ, ಕೊಟ್ಟಣದ ಸೊಮವ್ವೆ, ಕನ್ನಡಿ ಕಾಯಕದ ರೆಮ್ಮವ್ವೆ, ಕಾಲಕಣ್ಣಿಯ ಕಾಮಮ್ಮ, ಸೂಳೆ ಸಂಕವ್ವೆ, ಬಾಚಿ ಕಾಯಕದ ಕಾಳವ್ವೆ, ಸತ್ಯಕ್ಕ ಹೀಗೆ ಮಹಿಳೆಯರು ಮತ್ತು ಅವರ ಕಾಯಕವೆಲ್ಲ ಕೀಳು ಎಂದು ಪರಿಗಣಿಸಲ್ಪಟ್ಟಿದ್ದ ದಿನ ಮಾನಗಳು. ವ್ಯವಸ್ಥೆಯೊಂದು ಹುಟ್ಟುಹಾಕಿದ ಇಂಥ ಕೀಳು ಕಾಯಕದಲ್ಲಿ ನಿರತಗೊಂಡರೂ ಅದೇ ಕಾಯಕದಲ್ಲಿಯೇ ದೈವಸಾಕ್ಷಾತ್ಕಾರ, ಆತ್ಮೋದ್ಧಾರ ಸಾಧ್ಯ ಎಂಬುದನ್ನು ತೋರಿಸಿಕೊಟ್ಟರು. ಕಾಯಕ ಸಮಾನತೆ ಮತ್ತು ವೃತ್ತಿ ಗೌರವವನ್ನು ಎತ್ತಿ ಹಿಡಿದರು. ಲಿಂಗ ಹಾಗೂ ಆರ್ಥಿಕ ಅಸಮಾನತೆಯಂಥ ವ್ಯವಸ್ಥೆಯ ಜೀವ ವಿರೋಧಿ ಧೋರಣೆಗಳ ಕುರಿತು ಇವರು ಕಿಡಿಕಾರಿದರು. ಪರಿವರ್ತನೆಗೆ ಹಂಬಲಿಸಿದರು.

ಸ್ವಾಭಿಮಾನ ಮತ್ತು ವ್ಯವಸ್ಥೆಯ ವಿಡಂಬಣೆಯಲ್ಲಿ ಸ್ತ್ರೀ ವಚನಕಾರರು ತೋರಿದ ದಿಟ್ಟತನ ಗಮನಾರ್ಹವಾದದ್ದು. ಪರಂಪರಾಗತವಾಗಿ ಹೆಣ್ಣನ್ನು ಕರ್ತವ್ಯ ಭ್ರಷ್ಟಳನ್ನಾಗಿ, ನಿರುಪಯುಕ್ತ ವಸ್ತುವನ್ನಾಗಿ, ವಿನಿಮಯದ ಸರಕನ್ನಾಗಿ ಮಂಡಿಸುತ್ತಾ ಬಂದ ಹುನ್ನಾರಗಳು ಕಡಿಮೆ ಏನಿಲ್ಲ. ಉದ್ದೇಶ ಪೂರಕವಾಗಿ ಹೇರಿದ ಇಂಥ ನಿರ್ವೀರ್ಯತೆಯನ್ನು ಮೊತ್ತಮೊದಲಬಾರಿಗೆ ಪ್ರತಿರೋಧಿಸಿದವರು

ಅಲಕ್ಷಿತ ವಚನಕಾರ್ತಿಯರೆ ಎಂದು ಹೇಳಬಹುದು. ವ್ಯಕ್ತಿಯ ಪ್ರಗತಿಯನ್ನು ವಿಗತಿಯನ್ನಾಗಿಸುವ ಪ್ರತಿಗಾಮಿ ಶಕ್ತಿಗಳ ವಿರುದ್ಧ ಪ್ರಗತಿಗಾಮಿಯಾದ ಚಳುವಳಿಯನ್ನೇ ಕಟ್ಟಿಬೆಳೆಸಿದರು. ಹೆಣ್ಣು ಬರೀ ಉಪಭೋಗದ ವಸ್ತು. ಆಧ್ಯಾತ್ಮಿಕ ಸಾಧನೆಗೆ, ಪೂಜಾಕಾರ್ಯಗಳಿಗೆ ಅನುಪಯುಕ್ತಳು ಎನ್ನುವ ಅಮಾನುಷ ಪ್ರವೃತ್ತಿಗಳನ್ನು ಪ್ರಶ್ನಿಸಿದರು. ಹೆಣ್ಣು ಎಂದರೆ ಉತ್ತಮ ಕುಲದಲ್ಲಿ ಮಾತ್ರ ಹುಟ್ಟಿದವಳು. ಎನ್ನುವ ನಿಲುವುಗಳನ್ನು ಬುಡಮೇಲು ಮಾಡಿದರು.

ಸೂಳೆವೃತ್ತಿಯಂಥಹ ಅನೇಕ ಅಲಕ್ಷಿತ ವೃತ್ತಿ ನಿರತ ಮಹಿಳೆಯರು. ಆ ವೃತ್ತಿಗೆ ಬದ್ಧರಾಗಿದ್ದುಕೊಂಡೇ ಆಧ್ಯಾತ್ಮಸಾಧನೆ ಹೊಂದಿದ್ದು, ಪರಂಪರೆಯಲ್ಲಿ ಆಧ್ಯಾತ್ಮದೆತ್ತರಕ್ಕೇರಲು ಹುಟ್ಟುಹಾಕಿದ ಮೆಟ್ಟಿಲುಗಳನ್ನು ಪುಡಿ ಪುಡಿ ಮಾಡಿದಂತಾಯಿತು. ಕ್ರಿಯೆ ಮತ್ತು ಅರಿವಿನ ಈ ಸಾಮರಸ್ಯ ವೃತ್ತಿ ಮತ್ತು ಆ ಮೂಲಕ ವ್ಯಕ್ತಿ ಹಾಗೂ ಆತನ ಸಾಮುದಾಯಿಕತೆಗೆ ಒಂದು ಉನ್ನತಿಯನ್ನು ತಂದುಕೊಟ್ಟಿತು. 'ಆವಕಾಯಕವಾದರೇನು ಮನಮುಟ್ಟಿಮಾಡಿದರೆ' ಎನ್ನುವ ಮಾತುಗಳು ಕಾಯಕದ ಮೂಲಕ ಜಾತಿಯ ನಿರ್ದಿಷ್ಟತೆಗಳನ್ನು ಸುಟ್ಟುಹಾಕಿದವು. 'ಕಾಯ'ವನ್ನು ಕಾಯಕವಾಗಿಸುವ ಮೂಲಕ ದೇಹದ ನಿವೃತ್ತಿ ಮಾರ್ಗಕ್ಕಿಂತ ಅದರ ಪ್ರವೃತ್ತಿಮಾರ್ಗಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದರು. ಇದರಿಂದ ದೇಹ ಪ್ರಧಾನವಾದ ಸೂಳೆಗಾರಿಕೆಯೂ ಕೂಡ ಆಧ್ಯಾತ್ಮಿಕ ಎಚ್ಚರವನ್ನು ಪಡೆದುಕೊಂಡಿತು. ಮನುಷ್ಯನ ಭೌತಿಕ ಸ್ಥರಗಳಿಗಿಂತ ಭಿನ್ನ ಪರಿಸರಗಳಿಗಿಂತ ಆತನ ಕ್ರಿಯೆಗೆ ಒತ್ತುಕೊಟ್ಟರು. ಆ ಮೂಲಕ ಅರಿವಿನ ಅನಾವರಣ ಮಾಡಿದರು. ಕ್ರಿಯೆ ಮತ್ತು ಅರಿವಿನ ಈ ಏಕೀಕರಣದಿಂದ ಮನುಷ್ಯನನ್ನು ಸ್ವಾಭಿಮಾನಿ ಮತ್ತು ಶ್ರದ್ಧಾವಂತನನ್ನಾಗಿ ರೂಪಿಸಲು ಯತ್ನಿಸಿದರು. ಸಾಮಾಜಿಕ ಶ್ರೇಣೀಕರಣವಲ್ಲದೆ ಮನುಷ್ಯನ ಭೌತಿಕ ರಚನೆಯಲ್ಲಿದ್ದ ಮೇಲು-ಕೀಳಿನ ಮನೋಭಾವವನ್ನು ತೊಡೆದು ಹಾಕಿದರು. ಇದರಿಂದ ಅಲಕ್ಷಿತವಾಗಿ ಉಳಿದಿದ್ದ ಎಷ್ಟೋ ಸ್ತ್ರೀ ಸಂವೇದನೆಗಳು ತನ್ನ ಅನುಭವ ಜಗತ್ತಿನೊಂದಿಗೆ ವಚನ ಚಳುವಳಿಯಲ್ಲಿ ಸೇರ್ಪಡೆಯಾದವು. ಹಂಚಿ ತಿನ್ನುವ ಕೂಡಿ ದುಡಿಯುವ ಹಲವಾರು ಸಾಮುದಾಯಿಕ ಸಂವೇದನೆಗಳು ಉನ್ನತಿಗೆ ಬಂದು ಪ್ರಗತಿಗಾಮಿಯಾದ ಚಿಂತನೆಗಳನ್ನು ಹರಿಯಬಿಟ್ಟವು.

## ೪.೧ ಆರ್ಥಿಕ ಅಸಮಾನತೆ

ವಚನ ಚಳುವಳಿಯು ಸಾಂಸ್ಥಿಕವಾದ, ಸಾಂಘಿಕವಾದ ಉತ್ತಮಾಂಶಗಳನ್ನು ತರಲು ಪ್ರಯತ್ನಿಸಿತಲ್ಲದೆ, ಅದನ್ನು ಕಾರ್ಯ ಪ್ರವೃತ್ತಗೊಳಿಸುವಲ್ಲಿ ಶ್ರಮಿಸಿತು. ಆರ್ಥಿಕ ಅಸಮಾನತೆ ಕಳೆಯಲು ಸ್ವಾಸ್ಥ್ಯ, ಸ್ವಾವಲಂಬಿ, ಸಂಪತ್ತಿನ ವಿಲೇವಾರಿ ಕ್ರೋಢೀಕರಣಗಳಂತಹ ಚಟುವಟಿಕೆಗಳಿಗೆ ಅಧ್ಯತೆ ಕೊಟ್ಟರು.

ಹೀಗಾಗಿ ಕಾಯಕವು ವಚನ ಚಳುವಳಿಯ ಮೂಲ ತತ್ವವಾಗಿತ್ತಲ್ಲದೆ ವಚನಕಾರರ ಮತ್ತು ವಚನಕಾರ್ತಿಯರ ಜೀವನ ಮೌಲ್ಯವು ಆಯಿತು. ಸುಭದ್ರವಾದ ಅರ್ಥವ್ಯವಸ್ಥೆಗೆ ಕಾಯಕವೇ ಮೂಲ ಎಂದು ಮನಗಂಡರು. ಸರ್ವಸಮಾನತೆ, ಶೋಷಣಾರಹಿತ ಸಮಾಜ ನಿರ್ಮಿಸುವಲ್ಲಿ ನಿರತರಾದ ಶರಣ-ಶರಣೆಯರೆಲ್ಲರೂ ಆರ್ಥಿಕ ಬದಲಾವಣೆಗಳನ್ನು ತಂದರು.



'ಆವ ಕಾಯಕ ಮಾಡಿದರೂ ಒಂದೇ ಕಾಯಕವಯ್ಯ' ಎನ್ನುವ ಗಂಗಮ್ಮ ಹಾದರದ ಕಾಯಕದಲ್ಲಿ ನಿರತಳಾದ ಒಬ್ಬ ಸಾಮಾನ್ಯ ಸ್ತ್ರೀ. ಈಕೆ ಕಾಯವನ್ನೇ ಕಾಯಕಕ್ಕೇರಿಸಿ ಆತ್ಮಜ್ಞಾನದ ಸಾಕ್ಷಾತ್ಕಾರಕ್ಕೆ ಹಂಬಲಿಸಿದಳೂ, ಹಾಗೆಯೇ ಲಕ್ಕಮ್ಮನಂತಹ ಸಾಮಾನ್ಯ ಮಹಿಳೆ 'ಆಸೆಯೆಂಬುದು ಎನಗೇಕೆ'? ಎನ್ನುವ ಮೂಲಕ ವ್ಯವಸ್ಥೆಯೊಂದು ಹೆಣ್ಣಿಗೆ ಅಂಟಿಸಿದ್ಧ ಚಂಚಲತೆಯ ಹಣೆ ಪಟ್ಟಿಯನ್ನು ಕಿತ್ತು ಹಾಕುತ್ತಾಳೆ. ಆಸೆ ಆಮಿಷೆಗಳು ಹೆಣ್ಣಿಗೂ-ಗಂಡಿಗೂ ಸರಿಯೇ, ಇಲ್ಲಿ ಲಿಂಗಭೇದವಿಲ್ಲ, ಎಂಬಂಶ ವ್ಯಕ್ತವಾಗುವದು. ಅಷ್ಟೆ ಅಲ್ಲ 'ಆಸೆಯೆಂಬುದು ಅರಸಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯ' ಎಂಬ ವಾಕ್ಯದಲ್ಲಿ ಸಂಪತ್ತಿನ ಕ್ರೂಢೀಕರಣ ಸಲ್ಲದೆಂಬ ಧ್ವನಿ ಉಕ್ತವಾಗಿದೆ, ಅಲ್ಲದೆ ಶುದ್ಧಕಾಯಕದಿಂದ ಬಂದದ್ದನ್ನು ಮಾತ್ರ ಶಿವ ಪಡೆಯಬಲ್ಲ, ಸ್ವಾರ್ಥಪರ ಸಂಗ್ರಹ ವಿನಾಶಕಾರಕ ಸಂಪತ್ತಿನ ಸರಿಯಾದ ವಿಲೇವಾರಿ ಮಾತ್ರ ಮಾನವಿಕ ಸಂಬಂಧಗಳನ್ನು ಸಾಮುದಾಯಿಕ ಚಹರೆಗಳನ್ನು ಉಳಿಸಬಲ್ಲದು ಮತ್ತು ಬೆಳೆಸಬಲ್ಲದು ಎಂಬ ವಚನಕಾರ್ತಿಯರ ನಿಲುವಿಗೂ ಸಂಪತ್ತೇ ಇಂದಿನ ಶ್ರೇಷ್ಠ ಮೌಲ್ಯವಾಗಿರುವ ನಮ್ಮ ಸಂದರ್ಭಕ್ಕೂ ಎಂಥ ವಿಪರ್ಯಾಸ. ಇಲ್ಲಿ ತನ್ನ ಮನೆಗಿಂತ ತನ್ನ ಸಮಾಜ ಸುಖಿಯಾಗಬೇಕೆಂಬಂಶ ಎದ್ದು ತೋರುವುದು. ಈ ವಚನಕಂಡಾಗ ಶಿವಶರಣೆಯರು ಯಾವ ಸಮಾಜ ಹಿತ ಚಿಂತಕರಿಗೂ ಕಡಿಮೆ ಇರಲಿಲ್ಲ ಎಂಬಂಶ ಸ್ಪಷ್ಟಗೊಳ್ಳುವುದು.



'ಕಾಯಕ ತಪ್ಪಾದಡ ಸೈರಿಸಲಾರದೆಂದು' ಎನ್ನುವ ಬಾಚಿ ಕಾಯಕದ ಬಸಪ್ಪನ ಹೆಂಡತಿ ಕಾಳವ್ವೆಯ ವಚನದಲ್ಲಿ ಸಾಮಾಜಿಕ ಕಳಕಳಿ ಎದ್ದು ತೋರುವುದು. ಇಲ್ಲಿ ವ್ರತಕ್ಕಿಂತ ಕಾಯಕವು ಮುಖ್ಯ. ಇದರಿಂದ ಕಾಯಕ ವಚನ ಚಳುವಳಿಯ ಮೂಲ ಮಂತ್ರವಾಗಿತ್ತೆಂಬುದಂತು ನಿರ್ವಿವಾದದ ಸಂಗತಿ.

'ಕಾಯಕ ನಿಂದಿತ್ತು ಎನ್ನಾಳ್ದನ ಹೋಗಯ್ಯ' ಎನ್ನುವಲ್ಲಿ ಲಕ್ಕಮ್ಮನ ಸ್ವಾಭಿಮಾನ ಮತ್ತು ಸ್ವಾನುಭವದ ಉನ್ನತೀಕರಣವನ್ನು ಕಾಣುತ್ತೇವೆ. ಭಾರತೀಯ ಸಂಪ್ರದಾಯದಂತೆ ತಲತಲಾಂತರದಿಂದ ನಡೆದು ಬಂದ ವ್ಯವಸ್ಥೆ ಪತಿಯ ನೆರಳಲ್ಲಿ ಸತಿ ನಡೆವುದು. ಆದರೆ ವಚನಕಾರ್ತಿಯರು ಈ ಸಾಂಪ್ರದಾಯಿಕ ಕಟ್ಟಳೆಗಳನ್ನು ಕಿತ್ತೊಗೆದು ಹೊಸದೇ ಆದ ರೀತಿಯಲ್ಲಿ ಜೀವಿಸಿದ್ದು ಇಂದಿನ

ಸಮಾಜಕ್ಕೆ ಹಿಡಿದ ಕೈಗನ್ನಡಿ. ಲಕ್ಕಮ್ಮನಂತಹ ವಚನಕಾರ್ತಿಯು ಜನರನ್ನಷ್ಟೇ ಎಚ್ಚರಿಸದೆ ತನ್ನ ಪತಿಯನ್ನು ಎಚ್ಚರಿಸಿ ಅರಿವಿನ ಮಾರ್ಗದಲ್ಲಿ ಮುನ್ನಡೆಯುವಂತೆ ಮಾಡಿದ್ದು ಪ್ರಮುಖ. ಸತಿಯಿಂದ ಅರಿವಿನ ತಿಳಿಕಂಡ ಮಾರಯ್ಯ ಇನ್ನೊಂದು ವಚನದಲ್ಲಿ ಈ ರೀತಿ ಹೇಳುತ್ತಾನೆ.

*‘ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಯಬೇಕು*
*ಲಿಂಗಪೂಜೆಯಾದರೂ ಮರೆಯಬೇಕು.*
*ಜಂಗಮ ಮುಂದಿದ್ದಡೆಯೂ ಹಂಗುಹರಿಯಬೇಕು*
*ಕಾಯಕವೇ ಕೈಲಾಸವಾದ ಕಾರಣ*
*ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳು’*[೧]

ಎನ್ನುವ ಮಾರಯ್ಯನ ವಚನದಲ್ಲಿ ಸಮಾಜದ ಪ್ರಗತಿಗೆ, ಆತ್ಮೋದ್ಧಾರಕ್ಕೆ ಪೂರಕವಾದುದೇ ನಿಜವಾದ ಕಾಯಕ ಎನ್ನುವಲ್ಲಿ ವಚನಕಾರರ ಪ್ರಗತಿಗಾಮಿ ನಿಲುವು ಎದ್ದು ತೋರುವುದಲ್ಲದೆ ಸಮಾಜಕ್ಕೆ ಹೊರೆಯಾಗಿ ಪರಾವಲಂಬಿ ಜೀವಿಯಾಗಿ ಜೀವನ ನಡೆಸುವುದನ್ನು ಹೀಗಳೆದರು. ‘ದುಡಿದು ತಿನ್ನುವ ರೀತಿಗೆ ಪ್ರಾಧಾನ್ಯತೆ ನೀಡಿದರಲ್ಲದೆ ಪ್ರತಿಯೊಬ್ಬರು ಉಪಜೀವನಕ್ಕಾಗಿ ವೃತ್ತಿಯೊಂದನ್ನು ಅನುಸರಿಸುವುದು. ವೃತ್ತಿಯನ್ನು ಗೌರವ ಭಾವನೆಯಿಂದ ಮಾಡುವುದಲ್ಲದೆ ಕೆಲಸಕ್ಕೆ ತಕ್ಕ ಫಲ ಮಾತ್ರ ಪಡೆಯುವುದು, ಹೆಚ್ಚಿನ ಧನ ದಾಸೋಹದಲ್ಲಿ ವಿನಿಯೋಗಿಸುವುದು ಎಲ್ಲ ಕಾಯಕಗಳು ಸರಿ ಸಮಾನ’[೨] ಎಂಬ ಮೂಲ ಭೂತ ಅಂಶಗಳು ವಚನಕಾರರು ಮತ್ತು ಅಲಕ್ಷಿತ ವಚನಕಾರ್ತಿಯರಲ್ಲಿ ಎದ್ದು ಕಾಣುವವು.

‘ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ’ ಎನ್ನುವ ಕದಿರೆ ರೆಮ್ಮವ್ವೆಯ ಈ ವಚನದಲ್ಲಿ ಕುಲಕ್ಕಿಂತ ಕಸುಬು ಮುಖ್ಯವಾದದ್ದು ಎದ್ದು ತೋರುವುದು.

‘ಧರ್ಮ ಎಂದರೆ ಬೇರೆಯ ಅರ್ಥ ಕಲ್ಪಿಸುವ ಸಂದರ್ಭದಲ್ಲಿ ಇಹದ ಜೀವನ ತಿರಸ್ಕರಿಸದೇ ಮುಂದಿನ ಗತಿಯನ್ನು ಆಲೋಚಿಸಬಹುದಾದ ದಾರಿಯೇ ಕಾಯಕ. ಎಂದರೆ ಜೀವನಾಧಾರವಾದ ಸಂಪಾದನೆಯ ಕ್ರಮಕ್ಕೂ ಆಧ್ಯಾತ್ಮಿಕ ಅನುಸಂಧಾನಕ್ಕೂ ಕಾಯಕ ಕೊಂಡಿಯಾಗಬೇಕು ಎಂಬುದು ಇವರ ಆಶಯ[೩]ವಾಗಿತ್ತು, ಎಂಬುದರಲ್ಲಿ ಸಂದೇಹವಿಲ್ಲ, ವೃತ್ತಿಗಳಿಂದಲೇ ಸ್ಥಾಪಿತಗೊಂಡ ಜಾತಿ ವ್ಯವಸ್ಥೆಯನ್ನು ಖಂಡಿಸಿ ವೃತ್ತಿ ಸಮಾನತೆ ತರುವದಕ್ಕಾಗಿಯೇ ಶರಣ-ಶರಣೆಯರು ಕಾಯಕ ತತ್ವವನ್ನು ಹುಟ್ಟು ಹಾಕಿದರು. ಕಾಯಕವು ಸೈದ್ಧಾಂತಿಕವಾಗಿ ಒಂದು ಆರ್ಥಿಕ ತತ್ವ. ಆರ್ಥಿಕತೆ ಅಧ್ಯಾತ್ಮಿಕತೆಗಳನ್ನು ಒಗ್ಗೂಡಿಸುವ ಪ್ರಯತ್ನವಿದು.

'ಮನ ಬಳಲಿ ಬಂದ ತೆರದನುವನರಿದು ಸಂದಿಲ್ಲದೆ ಸಂಶಯವಿಲ್ಲದೆ
ಜಂಗಮ ಲಿಂಗಕ್ಕೆ ದಾಸೋಹವೇ ಮಾಟ
ಕಾರೆಯಸೊಪ್ಪಾದರೂ ಕಾಯಕದಿಂದ ಬಂದುದು
ಲಿಂಗಕ್ಕೆ ಅರ್ಪಿತವಲ್ಲದೆ ದುರಾಶೆಯಿಂದ ಬಂದುದು ಅನರ್ಪಿತ
ಇದ ಕಾರಣ ಸತ್ಯ ಶುದ್ಧ ಕಾಯಕವ ನಿತ್ಯ ದ್ರವ್ಯವಾದರೆ
ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯ"

ಇಲ್ಲಿ 'ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕೆ ಅರ್ಪಿತ ಎಂಬ ಮಾತು ಸ್ವಂತ ದುಡಮೆಯ ಮಹತ್ವವನ್ನು ಅರುಹುವುದು. ಮತ್ತೊಬ್ಬರ ದುಡಿಮೆಯಲ್ಲಿ ಬದುಕುವುದು ಅಮಾನವೀಯವಾದುದು, ಸ್ವತಃ ದುಡಿದು ಬದುಕುವುದು ಆಧರಣೀಯ, ಅದರ್ಶನೀಯವಾದುದು ಎಂಬಂಶವನ್ನು ಈ ವಚನ ವ್ಯಕ್ತಗೊಳಿಸುವುದು.

'ಅರ್ಥದಾಸೆಗಾಗಿ ಬಡ್ಡಿಯ ತೆಗೆದುಕೊಂಡು
ಬಡವರ ಬಂಧನಕ್ಕಿಕ್ಕಿ ತುಡುಗು ವ್ಯಾಪಾರವ ಮಾಡಿ
ಸದಾಚಾರದಿಂದ ಆಚರಿಸಲರಿಯದೆ
ತನುಮನಧನದಲ್ಲಿ ವಂಚನೆಯಿಲ್ಲದ ಭಕ್ತರನರಿಯದೆ
ತೀರ್ಥಪ್ರಸಾದದಲ್ಲಿ ನಂಬುಗೆ ವಿಶ್ವಾಸವಿಲ್ಲದೆ
ಕಂಡಕಂಡವರ ಕೈಯೊಡ್ಡಿ ಇಕ್ಕಿಸಿಕೊಂಡು
ವಿಶ್ವಾಸವಿಲ್ಲದವರಿಗೆ ಅಪ್ಯಾವರಣ ಎಂತು ಸಿದ್ಧಿಯೋ"

ಎನ್ನುವ ಮಡಿವಾಳ ಮಾಚಯ್ಯನು ಮೇಲ್ವರ್ಗದ ಅಕೃತ್ಯಗಳನ್ನು ಖಂಡಿಸಿದ್ದಲ್ಲದೆ ಅಂಥವರಿಗೆ ದೇವ ಎಂತು ಒಲಿವನೋ? ಎಂಬ ಶಂಕೆ ವ್ಯಕ್ತಪಡಿಸಿರುವನು. ಆರ್ಥಿಕವಾಗಿ ಕೀಳಾದವರನ್ನು ಮತ್ತಷ್ಟು ಕೆಳಸ್ತರಕ್ಕೆ ನೂಕಲೆತ್ನಿಸುವ ವೈಧಿಕರ ವಿಕೃತ ಕಾಯಕಗಳಿಗೆ ಬೇಸತ್ತು ಮಠ, ಮಾನ್ಯಗಳ ಧಾರ್ಮಿಕ ಮತ್ತು ಸಾಮಾಜಿಕ ನೈತಿಕತೆಯನ್ನೇ ಪ್ರಶ್ನಿಸಿದ್ದಾನೆ.

ಇಂಥ ಮೌಲಿಕ ವಿಚಾರಗಳು ಇಂದಿನ ಸಂದರ್ಭಕ್ಕೂ ಹೆಚ್ಚು ಪ್ರಸ್ತುತ ಎನಿಸುತ್ತವೆ. ನಿರುದ್ಯೋಗಿಗಳಾಗಿ, ಸೋಮಾರಿಗಳಾಗಿ ಕಾಯಕದ ಪರಿಕಲ್ಪನೆಯೇ ಇಲ್ಲದ ತಂಡೋಪತಂಡವಾಗಿ ಬೆಳೆಯುವ ಪಿಳಿಗೆಗೆ ಈ ಸಂಗತಿಗಳು ದಾರಿದೀಪಗಳಾಗಿವೆ. ಆತ್ಮಸಾಕ್ಷಿ ಪ್ರತೀಕಗಳಾಗಿವೆ. ಇನ್ನೂ ಮುಂದುವರಿದು ಸ್ವಯಂಪೂರ್ಣ ಸ್ವಾವಲಂಬನೆ ಶ್ರಮದ ಫಲ ಕೆಲವರ ಸ್ವತ್ತಲ್ಲ, ಸಮಾಜವು ಪ್ರತಿಯೊಂದು ಜೀವಿಗೂ ಸಂಬಂಧಿಸಿದ್ದು, ಮಹಿಳೆಯು ಆರ್ಥಿಕವಾಗಿ, ಅಧ್ಯಾತ್ಮಿಕವಾಗಿ ಗಂಡಸಿನಷ್ಟೆ ಪ್ರಬಲಳು ಎನ್ನುವ ನಿಲುವನ್ನು ಪ್ರತಿಪಾದಿಸಿದರು.

'ಸತ್ಯ ಶುದ್ಧವಲ್ಲದುದು ಕಾಯಕವಲ್ಲ' ಎನ್ನುವ ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯ ಈ ವಚನದಲ್ಲಿ ಕಾಯಕದ ಸತ್ಯತೆ, ಶುದ್ಧತೆ, ಪ್ರಾಮಾಣಿಕತೆ, ಏಕಾಗ್ರತೆಯ ಅಂಶಗಳ ಮುಪ್ಪುರಿಗೊಂಡಿವೆ.

ಇವರು ಇಹದ ಬದುಕನ್ನು ತಿರಸ್ಕರಿಸದೆ ಅದರಲ್ಲಿದ್ದುಕೊಂಡೇ ತಮ್ಮ ದಾರ್ಶನಿಕತೆಯನ್ನು ಕಂಡುಕೊಂಡರು. ಇಹ-ಪರಗಳ ಸಮನ್ವತೆಯ ಅರಿವನ್ನು ಸಾಧಿಸಿ ತೋರಿಸಿದರು, ಪರದ ಸಾಧನೆಗೆ ಇಹದ ಜೀವನ ಗೌಣವೆಂದಾಗಲಿ ಇಹದ ಬದುಕು ಮೋಕ್ಷಕ್ಕೆ ಮುಳು ಎಂದಾಗಲಿ ಅವರು ಹೇಳಲಿಲ್ಲ, ಕೌಟುಂಬಿಕ ನೆಲೆಗಟ್ಟಿನಲ್ಲಿ ಆರ್ಥಿಕ ಸ್ವಾವಲಂಬನೆ ಪಡೆದ ಮಹಿಳೆಯರೆಂದರೆ ಈ ಅಲಕ್ಷಿತ ವಚನಕಾರ್ತಿಯರೆ ಆಗಿದ್ದಾರೆ. ಉತ್ಪಾದನೆಯಲ್ಲಿ ಗಂಡಿಗೆ ಸಮಾನವಾಗಿ ಆರ್ಥಿಕ ಹೊಣೆ ಹೊತ್ತು ಪತಿಯನ್ನೇ ಎಚ್ಚರಿಸಿ ಸನ್ಮಾರ್ಗದಲ್ಲಿ ನಡೆವಂತೆ ಮಾಡಿದ ವಿಷಯಗಳು ಕಾಣ ದೊರೆಯುತ್ತವೆ. ಸಮಾಜದ ಶುದ್ಧತೆಗೆ ಆರ್ಥಿಕ ಸೂತ್ರಗಳು ಸರಿಯಾಗಿದ್ದರೆ ಮಾತ್ರ ಸಾಧ್ಯ ಎಂಬಂಶಗಳನ್ನು ಮನಗಂಡಿದ್ದರಿಂದಲೇ ಶರಣ-ಶರಣೆಯರೆಲ್ಲರೂ ಅದರಲ್ಲೂ ವ್ಯವಸ್ಥೆಯ ಕ್ರೂರ ದೃಷ್ಟಿಗೆ ಒಳಗಾದವರೆಲ್ಲ ಕಾಯಕ ಜೀವಿಗಳಾಗಿರುವುದು ಮುಖ್ಯವಾಗಿ ಕಾಣಿಸುತ್ತದೆ.

## ೪.೨ ಸಾಮಾಜಿಕ ಅನಿಷ್ಟಗಳು

ವಚನ ಚಳುವಳಿ ಧರ್ಮದ ಹೆಸರಿನಲ್ಲಿ ಒಡೆದು ಹೋದ ಸಮಾಜವನ್ನು ಸಮಾನತೆಯ ತಳಹದಿಯ ಮೇಲೆಯೇ ಕಟ್ಟಲು ನಿರ್ಧರಿಸಿದಂಥವರು. ಮಾನವೀಯ ಮೌಲ್ಯಗಳನ್ನೊಳಗೊಂಡ ಹೊಸ ತಾತ್ವಿಕ ಸಿದ್ಧಾಂತಗಳನ್ನು ವಚನಕಾರರು ಸ್ವೀಕರಿಸಿದರು. ಸಾಮಾಜಿಕ ಜಾಗೃತಿಯೇ ಅವರ ಮೂಲ ಉದ್ದೇಶವಾಗಿತ್ತು.

ಸಾಮಾಜಿಕ ಅನಿಷ್ಟಗಳಾದ ಪ್ರಾಣಿಬಲಿಯಂಥ ಆಚರಣೆ, ಕಠಿಣ ವ್ರತ, ನೇಮ, ಜಾತೀಯತೆಯಂತಹ ಅಸಮಾನತೆಯಿಂದ ಕೂಡಿದ ವ್ಯವಸ್ಥೆಯ ಅಮಾನವೀಯ ಮಜಲುಗಳನ್ನು ಬಯಲಿಗೆಳೆದರು. ಜಿಡ್ಡುಗಟ್ಟಿ ಹೋಗಿದ್ದ ಸಮಾಜದಲ್ಲಿ ಹೊಸಗಾಳಿಯೊಂದು ಬೀಸಿ ಸುಪ್ತವಾಗಿದ್ದ ಅನೇಕ ಚೇತನಗಳು ಅರಳಲು ಸಾಧ್ಯವಾಯಿತು. ಆದರೆ ಅಷ್ಟೇ ಬೇಗ ಚಳುವಳಿ ಮುದಿಡಿ ಹೋಗಿದ್ದು ದುರಂತವೇ ಸರಿ.

*'ದೇಶ ದೇಶವ ತಿರುಗಿ ಮಾತುಗಳ ಕಲಿತು*
*ದಾಸಿ ವೇಸಿಯ ಮಕ್ಕಳು ವಿರಕ್ತರೆಂತೆನ'*[1]

ಎನ್ನುವ ಅಮುಗೆ ರಾಯಮ್ಮ ವೇಷವ ಹಾಕಿಕೊಂಡು ಡಂಭಾಚಾರಿಗಳನ್ನು ಸೋಗು ಹಾಕಿ ತಿರುಗುವವರನ್ನು ತೀವ್ರವಾಗಿ ಖಂಡಿಸಿದ್ದಾಳೆ. ಅಲ್ಲದೆ 'ವೇಷವ ತೊಟ್ಟು ಗ್ರಾಸಕ್ಕೆ ತಿರುಗುವ ವೇಷಧಾರಿಗಳ ಕಂಡಡೆ ನಾಚಿತ್ತೆನ್ನ ಮನ'[2] ಎನ್ನುತ್ತ ಹೊಟ್ಟೆಪಾಡಿಗಾಗಿ ವಿರಕ್ತ ವೇಷಧರಿಸಿದವರನ್ನು ನಂಬದೆ ತನ್ನ ನೇರ ನಿಷ್ಠುರ ನುಡಿಗಳಿಂದ ಟೀಕಿಸುತ್ತಾಳೆ. ಧರ್ಮದ ಹೆಸರಿನಲ್ಲಿ ಅನ್ಯಾಯದ ಮತ್ತು

ಅಮಾನವೀಯ ಕೃತ್ಯಗಳನ್ನು ಎಸಗಿ ಸಮಾಜದ ಸ್ವಾಸ್ಥ್ಯವನ್ನೇ ಕಲುಷಿತಗೊಳಿಸುವ ಕಪಟ ವೇಷಧಾರಿಗಳ ಕುರಿತು ತನ್ನ ನಿಷ್ಠುರತೆಯ ಬಿರುನುಡುಗಳನ್ನಾಡಿದ್ದಾಳೆ.

*'ಊರ ಒಳಗಣ ಬಯಲು ಊರ ಹೊರಗಣ ಬಯಲೆಂದುಂಟೆ*
*ಊರೊಳಗೆ ಬ್ರಾಹ್ಮಣ ಬಯಲು ಊರ ಹೊರಗೆ ಹೊಲೆ ಬಯಲೆಂದುಂಟೆ'*[೮]

ಎನ್ನುವ ಬೊಂತಾದೇವಿ ಇಡಿ ವ್ಯವಸ್ಥೆಯನ್ನೇ ಪ್ರಶ್ನಿಸಿದ್ದಾಳೆ. ಜಾತೀಯತೆಯಂತಹ ಪೆಡಂಭೂತದಿಂದ ತತ್ತರಿಸಿ ಕುಸಿಯುತ್ತಿದ್ದ ಸಮಾಜಕ್ಕೆ ಈ ವಚನ ಒಳ್ಳೆಯ ಕೈಗನ್ನಡಿಯಾಗಿದೆ. ಬಯಲಿಗಿಲ್ಲದ ಜಾತಿಯತೆ ಬಯಲಾಗುವ ಮನುಷ್ಯನಿಗೆ ಎಲ್ಲಿಂದ ಬಂತು? ಎಂಬ ಪ್ರಶ್ನೆಯಂತು ಪುರೋಹಿತ ಶಾಹಿಯಿಂದ ಪರಿಪೋಷಿತವಾದ ಕರ್ಮಚಾರಗಳಿಗೆ ಕೊಟ್ಟ ಭಾರಿ ಪೆಟ್ಟೆ ಆಗಿದೆ. ಇಲ್ಲಿ ಸ್ಥಾಪಿತಗೊಂಡ ಮೌಲ್ಯಗಳನ್ನು ನಾಶಮಾಡುವ ಆಲೋಚನೆಗಳನ್ನು ಹೊಂದಿದ್ದು ಬಹು ಮುಖ್ಯವಾದ ಸಂಗತಿ.

*'ಕೊಂದಡೆ ಮುಕ್ತಿಯಿಲ್ಲವೆಂಬವರ ಬಾಯಲ್ಲಿ*
*ಪರಿಹಾರನ ಪಾದರಕ್ಷೆಯ ನಿಕ್ಕುವೆ'*[೯]

ಎನ್ನುವ ಕನ್ನಡಿ ಕಾಯಕದ ರೇವಮ್ಮ ಮಾನವ ಧರ್ಮಕ್ಕೆ ವಿರೋಧಿಯಾದವರನ್ನು ಕೊಂದರೆ ಪಾಪವಿಲ್ಲ, ಅದರಿಂದ ಸಾಮಾಜಿಕ ಶಾಂತಿ ದೊರೆಯುವುದು. ಇಲ್ಲಿ ವ್ರತ-ನೇಮಗಳಿಗಿಂತ ಮಾನವೀಯತೆ ಹಿರಿದು, ಅಮಾನವೀಯವಾಗಿ ವರ್ತಿಸುವವರನ್ನು, ಸಮಾಜಕಂಟಕರನ್ನು ತೀವ್ರವಾಗಿ ನಿಂದಿಸಿರುವಳಲ್ಲದೆ ಅಂಥವರ ಬಾಯಲ್ಲಿ ಪಾದರಾಕ್ಷೆಯನಿಕ್ಕುವೆ' ಎನ್ನುವಲ್ಲಿ ವ್ಯವಸ್ಥೆಯು ಆಕೆಗೆ ಕೊಟ್ಟ ಕಹಿ ಅನುಭವದ ತೀವ್ರತೆಯಿದೆ. ಮೇಲಸ್ತರದ ವಚನಕಾರ್ತಿಯರಲ್ಲಿ ಇಂಥ ಕೀಳಿಕರಣಗೊಂಡ ಪದಗಳು ಬಳಕೆಯಾಗುವುದು ಕಡಿಮೆ.

*'ವೃತ್ತ ಭ್ರಷ್ಟನ, ಲಿಂಗ ಬಾಹ್ಯನ ಕಂಡಡೆ*
*ಸತ್ತನಾಯಿ ಕಾಗೆಯ ಕಂಡಂತೆ*
*ಅವರೊಡನೆ ನುಡಿಯಲಾಗದು ಭೀಮೇಶ್ವರಾ'*[೧೦]

ಎಂದು ಸಿದ್ಧಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯು ವ್ರತ ತಪ್ಪುವವರನ್ನು ಸತ್ತ ನಾಯಿ ಕಾಗೆಗಳಿಗೆ ಹೋಲಿಸಿರುವಳು. ಕಾಯಾ ವಾಚಾ, ಮನಸಾ ಶುದ್ಧವಿಲ್ಲದೆ ಅರಿವು-ಕ್ರಿಯೆಗಳ ಸಮ್ಮಿಳಿತ ಹೊಂದದೆ ತಿರುಗುವವರನ್ನು ಕಾಗೆ-ನಾಯಿಗಳ ರೂಪಕ ಕೊಟ್ಟು ಅಂತವರೊಡನೆ ಮಾತನಾಡುವುದು ಅಪರಾಧ ಎಂಬ ಕಠೋರ ನಿರ್ಧಾರ ಮಾಡಬೇಕಾದರೆ ಅವರನ್ನು ಪ್ರತಿಷ್ಠಿತ ವ್ಯವಸ್ಥೆಯು ಕಂಡ ರೀತಿ ಎದ್ದುತೋರುವುದು. ಕೆಳಸ್ತರದವರಾದರೂ ಅವರಲ್ಲಿರುವ ಆತ್ಮಾಭಿಮಾನ, ಆಕ್ರೋಶ, ಪ್ರತಿಭಟನೆ, ಸಮಸ್ಯೆಯನ್ನು ಎದುರಿಸುವ ಸ್ಥೈರ್ಯ ಗಮನಾರ್ಹವಾದದ್ದು.

'ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದೆಯೇ? ಅಂತ್ಯಜನ ಪ್ರಾಣ ಕಡೆಗೋಲ ಹಿಡಿದಿಯೆ? ಒಡೆಯನ ಪ್ರಾಣ ಜನಿವಾರ ಧರಿಸಿಲ್ಲವಲ್ಲ? ಈ ವಚನ ಅಪಮಾನಿತ ವರ್ಗಕ್ಕೆ ಸ್ವಾಭಿಮಾನ ಮತ್ತು ಗತಿಶೀಲತೆಯನ್ನು ತಂದುಕೊಟ್ಟಿತು. ಇಲ್ಲಿ ಲಿಂಗ ಸಮಾನತೆ ಮತ್ತು ವರ್ಗಸಮಾನತೆಯ ಅಂಶಗಳನ್ನು ವ್ಯಕ್ತಪಡಿಸಿದ್ದಲ್ಲದೆ ಆಧ್ಯಾತ್ಮಿಕ ಸಮಾನತೆಯ ಹಾದಿಯಲ್ಲಿ ಸಾಮಾಜಿಕ ನಿರ್ಬಂಧಗಳನ್ನು ಮಿರುತ್ತಾ ಈ ಚಳುವಳಿ ಮಾನವೀಯ ನೆಲೆಗಳನ್ನು ಕಂಡುಕೊಂಡಿತು.

*'ಕಲ್ಲನಾಗರ ಕಂಡರೆ ಹಾಲನೆರೆಯೆಂಬರಯ್ಯ*
*ದಿಟನಾಗರ ಕಂಡರೆ ಕೊಲ್ಲು ಕೊಲ್ಲೆಂಬರಯ್ಯ'*[೧೧]

ಎಂದು ಬಸವಣ್ಣನವರು ಜಡದ ಪೂಜೆಯಲ್ಲಿ ಜೀವನ ವ್ಯರ್ಥ ಮಾಡಿಕೊಳ್ಳುವವರಿಗೆ ಬದಲು ಜಂಗಮ ಸೇವೆಯನ್ನು ಪ್ರತಿಪಾದಿಸಿದ್ದು ಮುಖ್ಯವಾದರೆ 'ಉದಯದಲೆದ್ದು ಪತ್ರೆ ಪುಷ್ಪಗಳಿಗೆ ಹೋಗು ಅಣ್ಣಗಳಿರಾ ನೀವು ಕೇಳಿರೋ?' ಎನ್ನುವ ಅಂಬಿಗರ ಚೌಡಯ್ಯನ ವಚನದಲ್ಲಿ ಇನ್ನೊಂದು ರೀತಿ ಅನುಭವ ನಿಹಿತವಾಗಿದೆ. ಹಾಲು, ನೇಮ, ನೈವೇದ್ಯದಂತ ರೂಪಗಳ ಬದಲು ಹಸಿಯ ತಪ್ಪಲು, ಅನ್ನ, ಹೊಟ್ಟೆ ಎಂಬ ಪ್ರತಿಮೆಗಳನ್ನು ಬಳಸಿರುವುದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇಲ್ಲಿ ಹಸಿವಿನ ಲೋಕದ ತೀವ್ರತೆ ಎದೆ ತಟ್ಟುತ್ತದೆ. 'ನಡೆನುಡಿ ಶುದ್ಧವಿಲ್ಲದವರು ಪುರಾತನರ ವಚನವ ಓದಿದಡೆ ಆ ಹಂದಿಗಿಂತ ಕರಕಷ್ಟ' ಎನ್ನುವ ಮೋಳಿಗೆ ಮಹಾದೇವಿಯು ಬೋಧಿಸುವವನ ನಡೆ ನುಡಿ ಶುದ್ಧವಾಗಿರಬೇಕು. ಅರಿವು, ಆಚಾರಗಳು ಸಮ್ಮಿಳಿತವಾಗಿರಬೇಕು. ಇಲ್ಲದಿದ್ದರೆ ಅಂಥವರು ಹಂದಿಗಿಂತ ಕನಿಷ್ಟ ಎಂದು ಹೀಯಾಳಿಸಿದ್ದಾಳೆ.

'ತನ್ನ ತಾನರಿಯದೆ ಅನ್ಯರಿಗೆ ಬೋಧೆಯ
ಹೇಳುವವನ ಬಾಳುವೆ ಕುರುಡ ಕನ್ನಡಿ ಹಿಡಿದಂತೆ'[೧೮]

ಎನ್ನುವಲ್ಲಿ ಲಿಂಗಮ್ಮ ಕುರುಡನಿಗೆ ಕನ್ನಡಿ ಹೇಗೆ ನಿರರ್ಥಕವೋ ಹಾಗೆ ಆತ್ಮಜ್ಞಾನವಿಲ್ಲದವನ ಬೋಧೆಯು ನಿರರ್ಥಕ. ಅದಕ್ಕಾಗಿ ತನ್ನನ್ನು ತಾನು ಮೊದಲು ತಿದ್ದಿಕೊಳ್ಳಬೇಕು 'ಮಾತಿನಲ್ಲಿ ಮಹಾಜ್ಞಾನಿಗಳೆಂಬ ವೇಷಧಾರಿಗಳ ಕಂಡು ನಾಚುವೆ' ಎನ್ನುವ ಅಂಶಗಳು ಅತ್ಯಂತ ಔಚಿತ್ಯಪೂರ್ಣವಾಗಿವೆ.

ವ್ಯವಸ್ಥೆಯ ಅವಜ್ಞೆಗೀಡಾದ ವಚನಕಾರ್ತಿಯರ ಅನುಭವ ಸಹಜ ಮಾತುಗಳು ಒಡಲಾಳದ ನೋವಿನ ಮೂಲದಿಂದ ಬಂದಿವೆ. ಈ ನೋವು ದೀನತೆಯ ದನಿಯಾಗದೆ, ಆತ್ಮಾಭಿಮಾನದ ನೈತಿಕ ಅಧಿಕಾರದ ಪ್ರಕರ್ಷವಾಗಿರುವುದು ಇಲ್ಲಿಯ ವಿಶೇಷ. ರಾಯಮ್ಮನ ನಿಷ್ಠುರ ಸ್ವಭಾವ, ಮುಕ್ತಾಯಕ್ಕನ ಪ್ರೌಢಿಮೆ, ಅಕ್ಕಮ್ಮನ ವ್ರತಾಚಾರ ಪ್ರಜ್ಞೆ, ಕಾಳವ್ವೆಯಂತವರ ಪ್ರತಿಕಾರಭಾವನೆ, ಲಕ್ಕಮ್ಮನಂತವರ ಪ್ರಗತಿಗಾಮಿ ನಿಲುವುಗಳೆಲ್ಲವೂ ಮಹಿಳೆಯ ಹೊಸ ಜಗತ್ತೊಂದನ್ನು ನಿರ್ಮಿಸಿಕೊಡುತ್ತದೆ.

## ೪.೩ ವ್ಯಕ್ತಿ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ

ವರ್ಣ ವ್ಯವಸ್ಥೆಯ ಕ್ರೂರ ಆಚರಣೆಯಿಂದ ಸಮಾಜದ ಅತ್ಯಂತ ಕೆಳಸ್ತರದವರೆಂದು ಕಡೆಗಣಿಸಲ್ಪಟ್ಟ ಶತ ಶತಮಾನಗಳಿಂದ ತುಳಿತಕ್ಕೆ ಸಿಕ್ಕ ಎಲ್ಲಸ್ತರದ ಮಹಿಳೆಯರೇ ಈ ಹೋರಾಟದಲ್ಲಿ ಮಹತ್ವದ ಪಾತ್ರವಹಿಸಿ ತಮ್ಮ ಸ್ವಾತಂತ್ರ್ಯ ಮೆರೆದುದು ಮುಖ್ಯ. 'ಪುರುಷ ಪ್ರಾಧಾನ್ಯತೆ, ನಿರಕ್ಷರತೆ, ಮಡಿ, ಮೈಲಿಗೆಯ ಆಚರಣೆ, ಅಸಮಾನತೆಗಳಿಂದ ಅಸ್ಪೃಶ್ಯಳೇ ಆಗಿದ್ದ ಮಹಳೆ, ಅದರಲ್ಲೂ ಸಾಮಾನ್ಯ ವರ್ಗದ ಮಹಿಳೆ ತನಗೆ ದೊರೆತ ಅವಕಾಶಗಳನ್ನು ಸರಿಯಾಗಿ ಉಪಯೋಗಿಸಿಕೊಂಡು ಇಂದಿಗೂ ಉಳಿಯುವ ಮತ್ತು ಅತಿ ಮೆಚ್ಚುಗೆಯಾಗುವ ಸ್ವತಂತ್ರ ವಿಚಾರ ಶೀಲತೆ, ವ್ಯಕ್ತಿ ಸ್ವಾತಂತ್ರ[೧೩] ಆಯ್ಕೆಯ ವಿಚಾರದಂತ ಗುಣಾತ್ಮಕ ಅಂಶಗಳು ವಚನಕಾರ್ತಿಯರ ವ್ಯಕ್ತಿ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಹಿರಿಮೆಯನ್ನು ಕಟ್ಟಿಕೊಡುತ್ತವೆ.

ಸ್ತ್ರೀಯರಿಗೆ ಕ್ರಿ.ಶ.೫೦೦ ರವರಗೆ ಮಾತ್ರ ವೇದಾಧ್ಯಯನ, ಯಜ್ಞನಿರ್ವಹಣೆಗಳ ಅಧಿಕಾರವಿತ್ತು, ಮುಂದೆ ಅದು ನಾಮಮಾತ್ರವಾಗಿ ಉಳಿದು ಬರಬರುತ್ತ ಸಂಪೂರ್ಣ ತಪ್ಪಿಹೋಯಿತು. 'ಋಗ್ವೇದ ಕಾಲದಲ್ಲಿ ಆಕೆಗಿದ್ದ ಸಮಾನ ಧಾರ್ಮಿಕ ಸ್ವಾತಂತ್ರ್ಯ ಬ್ರಾಹ್ಮಣಗಳಲ್ಲಿ ಉಳಿಯಲಿಲ್ಲ, ಉಪನಿಷತ್ ಕಾಲದಲ್ಲಿ ಆಕೆಯ ವ್ಯಕ್ತಿತ್ವ ವಿಕಾಸಕ್ಕೆ ಉತ್ತೇಜನ ದೊರೆತರೂ ಅವುಗಳ ಪ್ರಯೋಜನ ಪ್ರಭಾವ ಸ್ತ್ರೀ ಜನಪದದಲ್ಲಿ ಸಾಮೂಹಿಕವಾಗಿ ಅಷ್ಟು ಪರಿಣಾಮ ಬೀರಲಿಲ್ಲ. ಧರ್ಮ ಸೂತ್ರಗಳಲ್ಲಿ ಸ್ತ್ರೀಯ ಧಾರ್ಮಿಕ ಜಗತ್ತು ತೀರ ಸಂಕುಚಿತ ಚೌಕಟ್ಟು ನಿರ್ಮಾಣವಾಗಿ ತನ್ನ ಆತ್ಮೋನ್ನತಿಗಾಗಿ ವ್ರತ, ಉಪವಾಸ, ನಿಯಮಾದಿಗಳನ್ನು ಅನುಸರಿಸಿಕೊಂಡು ತನ್ನಲ್ಲಿಯೇ ಮಾನಸಿಕ ಶಾಂತಿಯನ್ನು ಪಡೆಯುತ್ತ ಬಂದಳು.[೧೪]

ಉಪನಿಷತ್ ಕಾಲದಲ್ಲಿ ಬೆಳಗಿದ ಗಾರ್ಗಿ, ಮೈತ್ರೇಯಿ, ಕಾತ್ಯಾಯಿನಿ, ಸುಲಭಾ, ವಡಬಾ ಇವರನ್ನು ಹೊರತು ಪಡಿಸಿದರೆ ಬೇರೆಯಾವ ವರ್ಗದವರೂ ಆಧ್ಯಾತ್ಮಿಕ ಗೋಷ್ಠಿ ಚರ್ಚೆಗಳಲ್ಲಿ ಭಾಗವಹಿಸಿದ್ದು ಕಂಡುಬರುವುದಿಲ್ಲ. ಆದರೆ ಅಸಂಖ್ಯಾತ ಮಹಿಳೆಯರು ವಚನಕ್ರಾಂತಿಯ ಪ್ರಗತಿ ಪ್ರವಾಹದಲ್ಲಿ ಪಾಲ್ಗೊಂಡು ಪ್ರವಾಹಕ್ಕೆ ಪ್ರೇರಣೆ ನೀಡಿದರು. ಇಷ್ಟೊಂದು ಮಹಿಳೆಯರು ಸಾಹಿತ್ಯಾಭಿವ್ಯಕ್ತಿಯಲ್ಲಿ ತೊಡಗಿದ್ದು ಜಾಗತಿಕವಾಗಿ ಪ್ರಪ್ರಥಮವಾದದ್ದು, ವೇಶ್ಯೆ, ಗೊಲ್ಲ, ಅಂಬಿಗ, ಚಮ್ಮಾರ, ಮಡಿವಾಳ, ಕಂಬಾರ ಹೀಗೆ ಸಮಾಜದ ಎಲ್ಲ ಸಮುದಾಯದಿಂದ ಬಂದವರಾಗಿದ್ದು ಅವರ ಹರಿತವಾದ ವಿಡಂಬನಾಶೈಲಿ ಮಾನವ ಮುಖಿ ಕಳಕಳಿಗಳು ಅವರ ವೈಯಕ್ತಿಕ ತುಡಿತಗಳಾಗಿರದೆ ಇಡೀ

ಸಮುದಾಯದ ಹಂಬಲಗಳಾಗಿದ್ದವು. ಶೋಷಣೆ, ತಿರಸ್ಕಾರ, ಉಪೇಕ್ಷೆ, ಬಡತನ ಅನುಭವಿಸಿದ ಜನ ತಮ್ಮ ಈ ಅನುಭವದ ಪಾತಳಿಯಿಂದಲೇ ಅನುಭಾವ ಪತಕ್ಕೇರಿದ ರೀತಿ ಅಭಿವ್ಯಕ್ತಿಸಿದ ಮಾರ್ಗ ಪ್ರಮುಖವಾದಂತದ್ದು.

ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ವಚನಕಾರ್ತಿಯರಲ್ಲಿಯೇ ದಿಟ್ಟಸ್ವಭಾವದ ಹೆಣ್ಣು. ಕೆಳಸ್ತರದಿಂದ ಬಂದಿದ್ದರೂ ತನ್ನ ಅವಿರತ ಸಾಧನೆಯಿಂದ ತನ್ನ ಹಣೆಬರಹವನ್ನೇ ಬದಲಿಸಿಕೊಂಡವಳು, ಅಸ್ಪೃಶ್ಯಳಾಗಿ ಅಸ್ಪೃಶ್ಯ ಬದುಕಿನ ನೋವು ಅವಳ ಮನದಲ್ಲಿ ನೆಲೆ ನಿಂತಿದೆ ಎಂಬುದನ್ನು ಆಕೆಯ ವಚನಗಳು ಸ್ಪಷ್ಟಗೊಳಿಸುತ್ತವೆ.

*'ಕುರಿ ಕೋಳಿ ಕಿರು ಮೀನು ತಿಂಬುವರಿಗೆಲ್ಲಾ ಕುಲಜ ಕುಲಜರೆಂದೆಂಬರು*
*ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗರು ಕೀಳು ಜಾತಿ ಎಂಬರು*
*ಅವರೆಂತು ಕೀಳು ಜಾತಿಯಾದಾರೂ, ಜಾತಿಗಳೇ ನಿವೇಕೇ ಕೀಳಾಗಿರೊ'*[10]

ಎನ್ನುವ ಕಾಳವ್ವೆಯ ಈ ವಚನ ಆಕೆಯ ದಿಟ್ಟ ಸ್ವಭಾವವನ್ನು ಸೂಚಿಸುತ್ತದೆ. ಉಸಿರು ಗಟ್ಟಿಸುವಂತ ವ್ಯವಸ್ಥೆಯಲ್ಲಿ ದಿಟ್ಟತನದಿಂದ ಬದುಕಿ ಬಾಳಿದ ರೀತಿ ನಿಜಕ್ಕೂ ಗಂಭೀರ ಸ್ವರೂಪದ್ದು, ಶ್ರೇಷ್ಠರೆನಿಸಿಕೊಳ್ಳುವವರು ಧರ್ಮದ ಹೆಸರಿನಲ್ಲಿ ಜೀವಂತ ಪ್ರಾಣಿಗಳನ್ನು ಬಲಿಕೊಡುವರು, ಆದರೆ ನಾವು ಸತ್ತ ಪ್ರಾಣಿಯ ಮಾಂಸ ತಿಂದವರು ಆದರೂ ನಾವು ಕೀಳೆ? ನಾವು ಅಪವಿತ್ರರೆ? ಅವರೇ ಶ್ರೇಷ್ಠರು ಹೇಗೆ? ನಾವು ಊರೊಳಗಿರಲು ಅರ್ಹರಲ್ಲ ಏಕೆ? ಎನ್ನುವ ಪ್ರಶ್ನೆಗಳು ಇಡೀ ಪುರೋಹಿತ ವರ್ಗವನ್ನು ಅವರ ಸೋಗಲಾಡಿತನವನ್ನು ಬೊಟ್ಟು ಮಾಡಿ ತೋರಿಸುತ್ತವೆ. ಅಲ್ಲದೆ ಇನ್ನೂ ಮುಂದುವರಿದು ಜಾತಿಗಳೇ ನಿವೇಕೇ ಕೀಳಾದಿರೋ? ಎಂದು ತಮ್ಮ ಜನರನ್ನು ಮೂದಲಿಸಿ ಅವರಲ್ಲಿ ಆತ್ಮಸ್ಥೈರ್ಯ ತುಂಬಿದವಳು. ಈಕೆಯ ವಚನದಲ್ಲಿ ಸ್ವಭಿಮಾನ ಶೀಲತೆ ಎದ್ದು ತೋರುವುದಲ್ಲದೆ ತಮ್ಮ ಕುಲದ ಆಹಾರ ಪದ್ಧತಿಯ ಒಪ್ಪಿಗೆ ಅದಕ್ಕೆ ತಕ್ಕ ಸಮರ್ಥನೆ ಆಕೆಯ ಬಂಡಾಯ ಪ್ರಜ್ಞೆಯನ್ನು ಎತ್ತಿ ತೋರಿಸುತ್ತದೆ. ಆಹಾರ ಪದ್ದತಿಯೊಳಗನ ಶ್ರೇಣಿಕರಣವನ್ನು ಇಲ್ಲಿ ಕಾಣಬಹುದಾಗಿದೆ. ಕುರಿಕೋಳಿಯಂತಹ ಜೀವಂತ ಪ್ರಾಣಿಗಳನ್ನೇ ತಿನ್ನುವವರು ಮೇಲು, ಸತ್ತದನ ತಿನ್ನುವವರು ಕೀಳು ಎನ್ನುವ ಮನೋಭಾವಗಳಿಗೆ ಕಾಳವ್ವೆ ಸ್ಪಷ್ಟ ಉತ್ತರ ಕೊಟ್ಟಿದ್ದಾಳೆ. ಕೆಳಜಾತಿಗಳೊಳಗೆ ಇರುವ ಶ್ರೇಣೀಕರಣವನ್ನು ಇದು ನಿರೂಪಿಸುತ್ತದೆ.

*'ಬಟ್ಟೆಯಲ್ಲಿ ಹೊನ್ನು ವಸ್ತ್ರಬಿದ್ದರೆ*
*ನಾನು ಕೈಮುಟ್ಟಿ ಎತ್ತಿದೆನಾದರೆ*
*ನಿಮ್ಮಾಣೆ ನಿಮ್ಮ ಪ್ರಮಥರಾಣೆ*

*ಅದೇನು ಕಾರಣವೆಂದರೆ ನೀ ವಿಕ್ಕಿದ ಭಿಕ್ಷದಲ್ಲಿಷ್ಟೆನಾಗಿ*
*ಇಂತಲ್ಲದೆ ನಾನು ಅಳಿಮನವ ಮಾಡಿ*
*ನೀನಾಗಲೇ ಎನ್ನ ನರಕದಲ್ಲಿ ಅದ್ದಿ ನೀನೆದ್ದು*
*ಹೋಗಾ ಶಂಬುಜಕ್ಕೇಶ್ವರಾ*[೧೬]

ಎನ್ನುವ ಸತ್ಯಕ್ಕ ವೃತ್ತಿಯಿಂದ ಕಸಗೂಡಿಸುವ ಕೆಲಸದವಳಾದರೂ ಆಕೆ ಮಾಡಲಾರೆ ಎಂಬುದು ಪರದ್ರವ್ಯಗಳು ಎದುರಿಗೆ ಬಿದ್ದಿದ್ದರೂ ಅದನ್ನು ಮುಟ್ಟಲಾರೆ ಎಂದು ಹೇಳುವ ಮಾತು ಆಕೆಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪ್ರಚುರ ಪಡಿಸುವುದು 'ಕಾವಿಕಾಷಾಂಬರವ ಹೊದ್ದು ಕಾಯಕ ವಿಕಾರಕ್ಕೆ ತಿರುಗುವ ಕರ್ಮಿಗಳ ಮುಖವ ನೋಡಲಾಗದು' ಎನ್ನುವ ರಾಯಮ್ಮನು ವೇಷಧರಿಸಿ ಮುಗ್ಧ ಜನರನ್ನು ಮೋಸಗೊಳಿಸುವ ಕ್ರಿಯೆರಹಿತ ಜನರನ್ನು ಮೂದಲಿಸುತ್ತಾಳೆ. ಜ್ಞಾನದೆತ್ತರ ಅನುಭವದ ಆಳ, ಇದ್ದುದನ್ನು ಇದ್ದಂತೆ ನಿರ್ಭೀತಿಯಿಂದ ಹೇಳುವ ರಾಯಮ್ಮನ ಮನೋಭಾವ ಇಡೀ ಕೆಳಬದುಕಿನ ಸಾಂಸ್ಕೃತಿಕ ಎಚ್ಚರವನ್ನು ಪ್ರತೇಕಿಸುತ್ತದೆ. ವಿರಾಗಿಣಿಯರು, ಗೃಹಣಿಯರು, ಸಾಮಾನ್ಯ ಸ್ತ್ರೀಯರೆಲ್ಲರು ತಮ್ಮ ತಮ್ಮ ಪರಿಮಿತಿಯೊಳಗೆ ಸಮಾಜ, ಪುರುಷ, ಸಮಾನತೆಯಂತಹ ಅನೇಕ ಅಸಮಾನ ನೆಲೆಗಳ ಕುರಿತಾಗಿ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದ್ದು ಗಮನಾರ್ಹ ಅಂಶ.

*'ಹೆದರದಿರು ಮನವೆ ಹಿಮ್ಮೆಟ್ಟದಿರು ಮನವೆ*
*ಹಿಡಿದ ಛಲ ಬಿಡದಿರು ಮನವೆ*
*ಜರಿದರೆಂದು ಝುಂಕಿಸಿದರೆಂದು*[೧೭]

ಎನ್ನುವಲ್ಲಿ ರಾಯಮ್ಮನು ಮನುಷ್ಯನ ನಿರ್ವೀರ್ಯ ಸ್ಥಿತಿಯನ್ನು ಖಂಡಿಸುತ್ತಾಳೆ. ಹೆಣ್ಣನ್ನು ಕೈಲಾಗದವಳನ್ನಾಗಿ, ಅಸಹಾಯಕಳನ್ನಾಗಿ ಗಂಡಿಗೆ ಸಮಾನವಾಗಲಾರಳು ಎಂದೆನ್ನುವ ಪಾರಂಪರಿಕ ಹುನ್ನಾರುಗಳನ್ನೇ ಮೆಟ್ಟಿ ನಿಲ್ಲುವಂತೆ ರಾಯಮ್ಮ ಮಾತನಾಡಿದ್ದಾಳೆ. ಅವಳು ಸ್ವಗತ ಎನ್ನುವಂತೆ ಮನಕ್ಕೆ ಹೇಳಿದರೂ ಮನವೇ ತಾನೆ ಗತಿಶೀಲತೆಯನ್ನು ಹೊಂದಿರುವುದು. ನಮ್ಮ ಮನೋನಿರ್ಧಾರದ ಮೇಲೆ ನಮ್ಮ ಕೆಲಸಗಳಿಗೆ ಗಟ್ಟಿತನ ಧೈರ್ಯಬರುವುದು ಎಂಬ ನೆಲೆ ಮನುಷ್ಯನ ಕ್ರಿಯಾ ಶೀಲಗುಣದ ವಿಶೇಷತೆಯನ್ನು ಹೇಳುತ್ತದೆ. ಸ್ವತಂತ್ರ ವಿಚಾರಶೀಲನೂ ಸ್ವಾಭಿಮಾನಿಯಂತ ಅರಿವು ಮತ್ತು ಕ್ರಿಯೆಗಳೊಂದಾದ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಈ ವಚನ ಕಟ್ಟಿಕೊಡುತ್ತದೆ. ವೈಯಕ್ತಿಕ ನೆಲೆಯನ್ನು ನಿರಸನ ಮಾಡಿಕೊಂಡ ವ್ಯವಸ್ಥೆಯಿಂದ ದೂರ ಸರಿಯದೆ ಅದರೊಂದಿಗೆ ಹೋರಾಡುತ್ತಾ ಬದುಕಬೇಕು. ಎನ್ನುವಲ್ಲಿ ಆಕೆಯ ಸ್ಥೈರ್ಯ ಮುಖ್ಯ.

*'ಆರು ಇಲ್ಲದವಳೆಂದು*
*ಅಳಿಗೊಳಲು ಬೇಡ ಕಂಡೆಯಾನ*
*ಒಲವಿನ ಒತ್ತೆಕಲ್ಲನ್ನು ಬೆವರಿಸಬಲ್ಲೆ ಕಾಣಿರೊ*[೧೮]

ಮುಕ್ತಾಯಕ್ಕನ ಈ ಮಾತು ಕೂಡ ಹೆಣ್ಣಿನ ಶಕ್ತಿ ಸಾಮರ್ಥ್ಯದ ಪ್ರತೀಕವಾಗಿದೆ. ಈ ವಚನದ ಕೊನೆ ಸಾಲು ಹೆಣ್ಣಿನ ಸಂಕಲ್ಪ ಶಕ್ತಿಯನ್ನು ಎತ್ತಿ ಹೇಳುತ್ತದೆ. ಹೆಣ್ಣಿಗಿರಬೇಕಾದ ಮಾನವ ಸಹಜ ಹಕ್ಕುಗಳನ್ನು ಈ ವಚನ ಎತ್ತಿಹೇಳುತ್ತದೆ. ಹೆಣ್ಣನ್ನು ಅವಳ ಜೈವಿಕ ಕಾರಣದಿಂದಾಗಿ ಬಗೆ ಬಗೆಯ ನೆಲೆಗಳಲ್ಲಿ ಅವಳನ್ನು ಶಕ್ತಿಹೀನ, ಅಬಲೆ, ಅಸಹಾಯಕಳು, ಎಂಬಿತ್ಯಾದಿಯಾಗಿ ವ್ಯವಸ್ಥೆ ಕಟ್ಟಿಹಾಕಿದೆ. ಅವಳ ನೈಜ ವ್ಯಕ್ತಿತ್ವವನ್ನೇ ಮರೆಸುವಷ್ಟು ಅವಳನ್ನು ಅಸಮರ್ಥಳನ್ನಾಗಿಸಿದೆ. 'ಆರೂ ಇಲ್ಲದವಳೆಂದು' ಎನ್ನುವ ಮಾತೆ ಹಲವಾರು ಪ್ರಶ್ನೆಗಳನ್ನು ಹುಟ್ಟಿಸುತ್ತದೆ. ಒಂದು ಕೌಟುಂಬಿಕ ವಾತಾವರಣದಲ್ಲಿ ಬದುಕುತ್ತಿರುವ ಹೆಣ್ಣು ಎಲ್ಲವಿದ್ದು ಇಲ್ಲದಂತಿರುವ ಸ್ಥಿತಿಯೇ ದುರ್ಬರವಾದದ್ದು, ಇದ್ದದ್ದೆಲ್ಲವೂ ಗಂಡಸಿಗೆ, ಗಂಡಿನಿಂದಲೇ ಅವಳ ವ್ಯಕ್ತಿತ್ವವನ್ನು ಅಳೆಯುವ ರೀತಿಯನ್ನು ವಚನ ಪ್ರಶ್ನಿಸುತ್ತದೆ. ವಚನಕಾರ್ತಿಯ ಜೊತೆಗಿರುವ ಸಂಬಂಧಗಳೆಂದರೆ ಒಂದು ಆತ್ಮಾಭಿಮಾನ ಇನ್ನೊಂದು ವ್ಯವಸ್ಥೆಯ ವಿಷಮ ಅನುಭವ, ಅವಳ ಆತ್ಮಬಲ ಕಲ್ಲನ್ನೇ ಬಗ್ಗಿಸುವಂಥದ್ದು ಕಲ್ಲನ್ನೇ ಬೆವರಿಸಬಲ್ಲಂಥದ್ದು, ಇಂಥ ಸ್ವಾಭಿಮಾನ ಮತ್ತು ದಿಟ್ಟತನದಿಂದಾಗಿಯೇ ಅಲಕ್ಷಿತ ವಚನಕಾರ್ತಿಯರು ನಮಗೆ ಮತ್ತೆ ಮತ್ತೆ ಬೇಕಾಗುತ್ತಾರೆ. ವ್ಯವಸ್ಥೆಗಂಜಿ ಫಲಾಯನ ಮಾಡದೆ ಮೇಲಬದುಕುವ ಈ ಗಟ್ಟಿತನ ಕೆಳವರ್ಗಗಳ ಕೌಟುಂಬಿಕ ಬದುಕಲ್ಲಿ ಹೆಣ್ಣುಗಂಡಿಗಿದ್ದ ಅಭೇದತೆಯನ್ನು ಕಟ್ಟಿಕೊಡುತ್ತದೆ. ಶ್ರಮಿಕ ಬದುಕಲ್ಲಿ ದುಡಿಮೆಗೆ ಗಂಡು ಹೆಣ್ಣು, ಮೇಲು ಕೀಳು ಎಂಬುದಿಲ್ಲ ಅಲ್ಲಿ ಎಲ್ಲವು ಸಮನಾಗಿಯೇ ಸಾಗುವಂಥದು, ಗಂಡಿಗಿರುವಷ್ಟೇ ಪ್ರಾಮುಖ್ಯತೆ ಅಲ್ಲಿ ಹೆಣ್ಣಿಗೂ ಇದೆ. ಹೆಣ್ಣಿಗೂ ಒಂದು ವ್ಯಕ್ತಿತ್ವ ಅಲ್ಲಿ ಪ್ರಧಾನವಾಗಿ ಕಾಣುತ್ತದೆ. ಈ ದೃಷ್ಟಿಯಿಂದ ಈ ವಚನ ತುಂಬ ಅರ್ಥಪೂರ್ಣವೆನಿಸುತ್ತದೆ.

*'ಎಲ್ಲರ ಹೆಂಡಿರು ತೊಳಸಿಕ್ಕುವರು*
*ಎನ್ನ ಗಂಡಂಗೆ ತೊಳಸುವುದಿಲ್ಲ*
*ಎಲ್ಲರ ಗಂಡಂದಿರಿಗೆ ಬಸಿವರು*
*ಎನ್ನ ಗಂಡಿಂಗೆ ಬಸಿವುದಿಲ್ಲ*
*ಎಲ್ಲರ ಗಂಡಂದಿರಿಗೆ ಜೀಜವುಂಟು*
*ಎನ್ನಗಂಡಂಗೆ ಅಂಡದ ಬೀಜವಿಲ್ಲ*
*ಎಲ್ಲರ ಗಂಡಂದಿರು ಮೇಲೆ*
*ಎನ್ನಗಂಡ ಕೆಳಗೆ, ನಾ ಮೇಲೆ*
*ಕದಿರೆ ರೆಮ್ಮೆಯೊಡೆಯ ಗುಮ್ಮೇಶ್ವರಾ'*[೮]

ಇಲ್ಲಿ ಕದಿರೆ ರೆಮ್ಮವ್ವೆ ತನ್ನ ಅಭಿವ್ಯಕ್ತಿಯನ್ನು ಯಾವ ಸಂಕೋಚವಿಲ್ಲದೆ ಅಭಿವ್ಯಕ್ತಿಸಿದ್ದು ಅಸಾಧಾರಣ ಸಂಗತಿಯೇ ಸರಿ. 'ಹೆಣ್ಣು ಸಾಮಾನ್ಯ ವೈವಾಹಿಕ ಜೀವನದಲ್ಲಿ ಗಂಡಿಗೆ ಅಧೀನವಾಗಿರುವ ಸಂಗತಿಯನ್ನು ಆಕೆ ಇಲ್ಲಿ ವರ್ಣಿಸುತ್ತಿದ್ದಾಳೆ. ಎಲ್ಲಾ ಬಗೆಯ ಸೂತಕಗಳಿಂದ ಬಿಡುಗಡೆ ಪಡೆದು

ಪವಿತ್ರಳಾಗಬೇಕಾದ ನಿರ್ಬಂಧಗಳನ್ನು ಹೆಣ್ಣಿಗೆ ಮಾತ್ರ ಪುರುಷ ನಿಯಮಿಸಿದ್ದಾನೆ. ಹೆಣ್ಣು ತನ್ನೆಲ್ಲಾ ಭೌತಿಕ ಚಟುವಟಿಕೆಗಳನ್ನು ಗಂಡಿಗಾಗಿ ಮೀಸಲಿಡಬೇಕಾಗಿದೆ. ರೂಢಿಗತ ಲೈಂಗಿಕ ಆಕೃತಿಯಲ್ಲಿ ಸಾಂಪ್ರದಾಯಕ ಸಮಾಜದ ಹೆಣ್ಣಿನ ಸ್ಥಾನಮಾನ ಸ್ಪಷ್ಟವಾಗಿದೆ. ಲೈಂಗಿಕ ಕ್ರಿಯೆಯಲ್ಲಿ ಗಂಡು ಮೇಲೆ ಇದ್ದು ಕೆಳಗೆ ಇರುವ ಹೆಣ್ಣನ್ನು ಅಧೀನದಲ್ಲಿಟ್ಟು ಕೊಂಡಿರುತ್ತಾನೆ. ಈ ಬಗೆಯ ಅಧೀನ ಸ್ಥಿತಿಯಲ್ಲಿರುವ ಹೆಣ್ಣಿಗೆ ಪ್ರತಿಯಾಗಿ ಇಲ್ಲಿ ಶಿವನ ಜೊತೆಗಿನ ಹೆಣ್ಣಿನ ಸಂಬಂಧ ತೀವ್ರತರವಾಗಿದೆ'[೫] ಇಲ್ಲಿ ಹೆಣ್ಣು ಸಂತಾನ ಬೆಳೆಸುವ ಗಂಡಿನ ಲೈಂಗಿಕ ತೃಷೆಯನ್ನು ನಿಗುವವಳಲ್ಲ, ಆಕೆಯಾರ ಅಧೀನಳೂ ಅಲ್ಲ, ಈ ವಚನದಲ್ಲಿ ಗಂಡು-ಹೆಣ್ಣಿನ ಸ್ಥಾನ ಪಲ್ಲಟಗೊಂಡು ಹೆಣ್ಣೇ ಗಂಡಿನ ಮೇಲೆ ಕುಳಿತಿರುವುದು ಆತ್ಮಗೌರವ ಹಾಗೂ ಸ್ವಾತಂತ್ರ್ಯಗಳ ಪ್ರತೀಕ. ಹೆಣ್ಣಿನ ಸ್ಥಾನ-ಮಾನದ ಮೇಲೆ ಈ ವಚನ ಚಳುವಳಿ ಪ್ರಭಾವ ಬೀರಿದ್ದು ಅಲ್ಲದೆ ಅವರ ಅಭಿವ್ಯಕ್ತಿ ಕ್ರಮವನ್ನು ಎತ್ತಿ ತೋರುವುದು. ಇಲ್ಲಿ ಹೆಣ್ಣಿನ ರೂಢಿಗತ ಸ್ಥಾನಮಾನಗಳು ಪಲ್ಲಟಗೊಂಡಿವೆ. ಈ ವಚನ ಲೌಕಿಕವಾಗಿಯೂ ಆಧ್ಯಾತ್ಮಿಕವಾಗಿಯೂ ಬಹುಮುಖ್ಯವಾದದ್ದು. ಶರಣ ಸಂಪ್ರದಾಯದಲ್ಲಿ ಸಾಮಾನ್ಯವಾಗಿ ಲಿಂಗಪತಿ-ಶರಣಸತಿ, ಈ ವಚನ ಶರಣ ಸತಿ ಲಿಂಗಪತಿಯೆಂದು ಸೂಚಿಸಿದರು. ಸತಿ-ಪತಿ ಭಾವವೇ ಪಲ್ಲಟವಾದ ಮತ್ತೊಂದು ಸಂಗತಿಯನ್ನು ಹೇಳುತ್ತದೆ. ಗಂಡಸಾದ ಶರಣ ಹೆಣ್ಣಾಗಿ ಸತಿಯಾಗಬೇಕು. ಆದರೆ ರೆಮ್ಮವ್ವೆ ಸಹಜವಾಗಿಯೇ ಹೆಣ್ಣು ಶರಣರಂತೆ ಭಾವದಲ್ಲಿ ಹೆಣ್ಣಾಗಿ ಪರಿವರ್ತಿತವಾಗಬೇಕಾದ ಅವಶ್ಯಕತೆಯಿಲ್ಲ, ಗಂಡು ಹೆಣ್ಣಾಗಿ ಹೆಣ್ಣಿನಂತೆ ಇರುವುದಕ್ಕೂ ಹೆಣ್ಣು ಹೆಣ್ಣಿನಂತೆ ವರ್ತಿಸುವುದಕ್ಕೂ ವ್ಯತ್ಯಾಸವಿದೆ, ಅಕ್ಕಮಹಾದೇವಿ ಹೆಣ್ಣಾಗಿದ್ದರೂ ಅವಳಲ್ಲಿ ಇಂಥ ದಿಟ್ಟತನ ಒಮ್ಮೆಮ್ಮೆ ಗೌಣವಾಗಿ ಕಾಣುತ್ತದೆ. ಹೆಣ್ಣಿಗೆ ಸಹಜವೆನ್ನುವಂತೆ ಆರೋಪಿಸಿರುವ ಗಂಡು ಮಕ್ಕಳ ಲಾಲನೆ ಪಾಲನೆ, ಅಡಿಗೆ ಕೆಲಸಗಳಂಥಹ ಜವಾಬ್ದಾರಿಗಳನ್ನು ರೆಮ್ಮವ್ವೆಯ ವಚನ ಪಲ್ಲಟಗೊಳಿಸುತ್ತದೆ. ಇಂದಿನ ಸ್ತ್ರೀವಾದಿಗಳು ಎತ್ತುವ 'ಶ್ರಮಸಮಾನತೆ' ಸಮಾನ ಜವಾಬ್ದಾರಿಗಳಂತಹ ಸಂಗತಿಗಳನ್ನು ಹನ್ನೆರಡನೆ ಶತಮಾನದಲ್ಲಿ ನಾವು ರೆಮ್ಮವ್ವೆಯರಂತಹ ವಚನಕಾರ್ತಿಯರಲ್ಲಿ ಕಾಣುತ್ತೇವೆ. ಆಧುನಿಕ ಬದುಕಿನಲ್ಲಿ ಗಂಡುಹೆಣ್ಣು ಒಟ್ಟೊಟ್ಟಿಗೆ ದುಡಿವ, ಒಟ್ಟೊಟ್ಟಿಗೆ ಬದುಕನ್ನು ಹಂಚಿಕೊಂಡು ಸವೆಸುವ ನೆಲೆಗಳನ್ನು ಕೆಳವರ್ಗಗಳಲ್ಲಿ ಬೇಕಾದಷ್ಟು ಕಾಣಬಹುದು. ವಿಚಿತ್ರವೆಂದರೆ ಅಲ್ಲಿ ಒಂದು ರೀತಿಯಲ್ಲಿ ಹೆಣ್ಣೆ ಅತಿ ಹೆಚ್ಚು ಡಾಮಿನೆಂಟ್ ಆಗಿರುತ್ತಾಳೆ. ಇದರಿಂದಾಗಿಯೇ ಅಲಕ್ಷಿತವಚನಕಾರ್ತಿಯರು ವ್ಯಕ್ತಿಗತವಾಗಿಯೂ ಅಭಿವ್ಯಕ್ತಿಯ ವಿಶಿಷ್ಟತೆಯಿಂದಾಗಿಯೂ ನಮಗೆ ಇಂದಿಗೂ ಮುಖ್ಯವೆನಿಸುತ್ತಾರೆ. ಆಧುನಿಕ ಬದುಕಿನ ಎಷ್ಟೋ ದಾಂಪತ್ತಿಕ ಅವಘಡಗಳಿಗೆ ವಚನಕಾರ್ತಿಯರ ಬದುಕು ಮತ್ತು ಬರಹ ಹಲವಾರು ಪರಿಹಾರಗಳನ್ನು ಗರ್ಭಿಕರಿಸಿಕೊಂಡಿದೆ ಎಂದರೆ ಉತ್ಪ್ರೇಕ್ಷೆಯಾಗಲಾರದು.

ಧಾರ್ಮಿಕ ಪರಂಪರೆ ಜೀವನದ ಗುರಿಯಾಗಿದ್ದು ಪರಂಪರಾಗತವಾಗಿ ರೂಢಿಯಲ್ಲಿದ್ದ ಪತಿಭಕ್ತಿ ಕಾಯಕ ಮುಂತಾದ ಮೌಲ್ಯಗಳಿಗೆ ತಲೆಬಾಗುತ್ತಲೆ ಅನೇಕ ವಚನಕಾರ್ತಿಯರು ಹೊಸ ಧರ್ಮವನ್ನು ಅನಾವರಣಗೊಳಿಸಿದ ರೀತಿ ಅಧ್ಭುತವಾದದ್ದು, 'ಪತಿಗೆ ಬುದ್ಧಿ ಹೇಳುವಷ್ಟು ಪ್ರಭುದ್ಧಳಾದ ಲಕ್ಕಮ್ಮ, ಬಸವಣ್ಣನಂಥವರಿಗೆ ಬುದ್ಧಿ ಹೇಳುವ ನೀಲಮ್ಮ, ಅದ್ಭುತ ಶಿಕ್ಷಕ ಮನೋಭಾವ ತೋರುವ ಲಿಂಗಮ್ಮ, ಗಂಡು-ಹೆಣ್ಣಿನ ಭೇದವನ್ನು ಖಂಡಿಸುವ ಗೊಗ್ಗವ್ವೆ ಇವರೆಲ್ಲಾ ಅಂದಿನ ಸಮಾಜ, ಸಂಪ್ರದಾಯ, ಸಂಸಾರಕುರಿತಾದ ಸ್ಥಾಪಿತ ಮೌಲ್ಯಗಳಿಗೆ ತಮ್ಮದೆ ಆದ ರೀತಿಯಲ್ಲಿ ವ್ಯಾಖ್ಯಾನ ನೀಡಿದರು.[೨೧]

'ಎಮ್ಮಾಕೆಯ ಕೈಮೊಗೆಯ ನೀರಿನಲ್ಲಿ ನಾಮವ ತೇಯಲಾಗಿ ನಾಮವುಳಿದು ನೀರಳಿಯಿತ್ತು, ಅಳಿದ ನೀರ ಹಗೆಸಿಕ್ಕಲಾಗಿ ನಿರ್ನಾಮವಾಯಿತ್ತು ನಾರಾಯಣ ಪ್ರೀಯ ರಾಮನಾಥನಲ್ಲಿ ನಿಶ್ಚಯವಾಯಿತ್ತೆನಗೆ' ಎನ್ನುವ ಕೊಂಡೆ ಮಂಚಣ್ಣನ ಈ ವಚನದಲ್ಲಿ ತನ್ನ ಹೆಂಡತಿಯಾದ ಲಕ್ಷ್ಮಮ್ಮನಿಗೆ ಗಂಡ ತೋರುವ ಗೌರವ ಎದ್ದು ಕಾಣುತ್ತದೆ. ಹಿಂದೂ ಸಂಪ್ರದಾಯವು ಹೆಣ್ಣನ್ನು ಪವಿತ್ರಕಾರ್ಯಗಳಿಂದ ದೂರವಿಡುತ್ತಾ ಬಂದಿರುವುದನ್ನು ಚರಿತ್ರೆ ತಿಳಿಸುತ್ತದೆ. ಉದಾಹರಣೆಗೆ ಶಿಕ್ಷಣ, ಉಪನಯನ, ಅಧ್ಯಾತ್ಮಿಕ ಸಾಧನೆ, ಪೂಜೆ, ಪುನಸ್ಕಾರಗಳಿಗೆ ಅವಳು ಯೋಗ್ಯಳಲ್ಲವೆಂಬ ಚೌಕಟ್ಟನ್ನು ನಿರ್ಮಿಸಿತ್ತು. ಇದಕ್ಕೆ 'ಎಲ್ಲಮ್ಮ'ನ ಜೀವನ ಉಪಯುಕ್ತ ನಿದರ್ಶನ. ಹೆಣ್ಣಿನ ಕರ್ತವ್ಯ ಭ್ರಷ್ಟತೆಯನ್ನು ಉದ್ದೇಶ ಪೂರ್ವಕವಾಗಿ ಎಲ್ಲಮ್ಮನ ಕಥೆ ಸಾರುತ್ತದೆ. ಜಮದಗ್ನಿಯನ್ನು ಮದುವೆಯಾದ ಎಲ್ಲಮ್ಮ ಮರಳಕೊಡ, ಹಾವಿನ ಸಿಂಬಿ ಮಾಡಿ ಆತನ ಪೂಜೆಗೆ ನೀರು ತರುವ ಕಾಯಕದಲ್ಲಿಯೆ ತಲ್ಲೀನಳಾದವಳು. ಸ್ವಭಾವತಃ ಮರಳು, ಹಾವು ನೀರು ಪರಸ್ಪರ ವಿರುದ್ಧ ದಿಕ್ಕಿನ ಚಲನೆವುಳ್ಳವು. ತನ್ನ ಲೌಕಿಕದ ದುಃಖ ಸುಖ ಕಾಮಕ್ರೋಧ ಬಯಕೆಗಳೆಂಬ ಮನೋವ್ಯಾಪಾರವನ್ನು ಒಟ್ಟಾಗಿ ಬೆಸೆದು ಅದರಲ್ಲಿ ತನ್ನ ರೂಪ ಯೌವನ ರಸ, ಸರಸಗಳನ್ನು ತುಂಬಿದವಳು. ಮರಳು ಬಿಂದಿಗೆಯಲ್ಲಿ ನೀರುತುಂಬಿದಂತೆ, ಇಂಥ ಅಚಲ ಶ್ರದ್ಧೆಯನ್ನು ಶ್ರದ್ಧಾಹೀನವಾಗಿಸಿದ ಪುರುಷ ಪ್ರಧಾನ ಸಂಸ್ಕೃತಿಯೇ ಅವಿಭಾಜ್ಯ ಅಂಗ, ಅದನ್ನು ಆ ಸಂಸ್ಕೃತಿಯನ್ನು ನಿಸತ್ವಗೊಳಿಸುವ ನಿರ್ವೀರ್ಯಗೊಳಿಸುವ ಹುನ್ನಾರವನ್ನು ಜಮದಗ್ನಿಯ ಪ್ರವೃತ್ತಿಯಲ್ಲಿ ಕಾಣುತ್ತೇವೆ.

ಕೆಳಸಂಸ್ಕೃತಿಗಳು ಮೂಲತಃ 'ತಾಯಿ' ಸಂಸ್ಕೃತಿಗೆ ಸೇರಿದಂಥವು, ಹೀಗಾಗಿ ಅಲ್ಲಿ ಹೆಣ್ಣಿಗೆ ಮತ್ತು ಅಂತಃಕರಣಕ್ಕೆ ಬಹು ಮುಖ್ಯಸ್ಥಾನ. ಮಂಚಣ್ಣನ ಮೇಲಿನ ವಚನವು ಇಂಥ ಸಂವೇದನೆಗಳಿಂದ

ರೂಪಪಡೆದಂಥದ್ದು. ಯಾವ ಸಂಸ್ಕೃತಿಯಲ್ಲಿ ಹೆಣ್ಣು ಧೂರ್ತಳಾಗಿ ಚಿತ್ರಿತಳಾಗಿರುವಳೋ ಅದಕ್ಕೆ ವಿರುದ್ಧವಾಗಿ ಅಲಕ್ಷಿತ ಸಂಸ್ಕೃತಿಗಳಲ್ಲಿ ಅವಳು ಬದುಕಿನ ಭಾಗವಾಗಿ, ಮಾರ್ಗದರ್ಶಕಳಾಗಿ, ಶಿಕ್ಷಕಳಾಗಿ, ವಿವೇಕಿಯಾಗಿ ಚಿತ್ರಿತಗೊಂಡಿದ್ದು ಎದ್ದುಕಾಣುತ್ತದೆ. ಹೀಗಾಗಿ ಕೆಳಜಾತಿಯ ವಚನಕಾರರು ಮತ್ತು ವಚನಕಾರ್ತಿಯರಲ್ಲಿ ಹೆಣ್ಣು ಗಂಡು ಎಂಬ ಭಾವನೆ ಪರಸ್ಪರ ಪೂರಕವಾದ, ಅನನ್ಯವಾದ ಪರಿಪೂರ್ಣತೆಯಾಗಿ ಪರಿಪಾಕಗೊಂಡಿದ್ದು ಗ್ರಹಿಕೆಗೆ ಬರುತ್ತದೆ. ಇಂಥ ಪುಣ್ಯಸ್ತ್ರೀಯಿಂದ ತಾನುಕೂಡಾ ನಿಜವಾದ ಅರಿವನ್ನು ಪಡೆದುಕೊಂಡೆವೆಂಬ ಕೃತಜ್ಞತೆಯನ್ನು ಹೇಳುವ ಮಂಚಣ್ಣನ ವಚನ ಒಂದು ಸಾಂಸ್ಕೃತಿಕ ಸತ್ಯವಾಗಿ ಹೆಣ್ಣು ಗಂಡಿನ ಸಂಬಂಧಗಳನ್ನು ಅರ್ಥಪೂರ್ಣವಾಗಿ ಮಂಡಿಸುತ್ತದೆ.

'ಹುಟ್ಟುಗೊಂಡು ತಿರುಗುವ ಕತ್ತೆ ಮನುಜರು ಅಣ್ಣಗಳಿರಾ ನೀವು ಕೇಳಿರೋ ಹೇಳಿಹೆನು' ಎನ್ನುವ ಲಿಂಗಮ್ಮನ ಈ ವಚನಗಳಲ್ಲಿ ಅತಿ ಸುಲಭ ಹಾಗೂ ನೇರ ಅಭಿವ್ಯಕ್ತಿಗಳಿವೆ. ಇಲ್ಲಿ ಪುರುಷಾಧಿಕಾರವನ್ನು ಪ್ರಶ್ನಿಸಿದ್ದಲ್ಲದೆ ಸ್ತ್ರೀ ಕೂಡಾ ಉಪದೇಶಕ್ಕೆ ಕಾರ್ಯ ತತ್ಪರತೆಗೆ ಯೋಗ್ಯಳೆನ್ನುವ ಅರ್ಥಸ್ಫುರಿಸುವದು. ಗತಾನುಗತಿಕವಾದ ವಿಚಾರಗಳನ್ನು ಸುಮ್ಮನೇ ಒಪ್ಪಿಕೊಳ್ಳುವ ಸ್ವಭಾವ ಅವಳದಾಗಿರಲಿಲ್ಲ, ಈಕೆಯ ವಚನಗಳು ಧಾರ್ಮಿಕ ಸಾಧನೆಯ ಆವರಣದಲ್ಲೆ ರೂಪಿತವಾಗಿದ್ದರೂ ಅವುಗಳ ತುಡಿತ ವ್ಯಕ್ತಿ ವ್ಯಕ್ತಿಗಳ ಮಧ್ಯ ನಿರ್ಮಾಣವಾಗಿದ್ದ ಜಡತೆಯನ್ನು ಅಹಂಕಾರವನ್ನು ನೀಗುವ ಧ್ವನಿಯಾಗಿ ನಿರ್ವಹಣೆಗೊಳ್ಳುತ್ತದೆ. ಮಹಿಳೆ ಎಂದರೆ ಸೇವಕಿ, ದಾಸಿ, ಸತಿ, ತೊತ್ತು, ಸಹಾಯಕಿ, ಪುರುಷನಿಂದಲೇ ಮುಕ್ತಿ ಪಡೆಯುವಳು, ಅಪವಿತ್ರಳು ಎಂಬಂತಹ ಅಸಮಾನತೆಯ ಅಮಾನವೀಯ ಸಂದರ್ಭದಲ್ಲಿ ಮಹಿಳೆಯರು ಧ್ವನಿ ಎತ್ತಿ ಪ್ರತಿಭಟಿಸಿ ಮುಸುಕಿದ ಅಂಧಕಾರವನ್ನು ಕಿತ್ತೊಗೆದು ಬೆಳಕಿನ ದಾರಿಯಲ್ಲಿ ಶ್ರಮಿಸಿ ಬೆಳಕನ್ನು ಕಂಡವರು.

ಮಹಿಳೆಯರಿಗೆ ಆಧ್ಯಾತ್ಮಿಕ ಸ್ಥಾನಕೊಟ್ಟರು ಎಂದು ದುಂಡಾಗಿಗ್ರಹಿಸುವ ವಿಚಾರಗಳನ್ನು ಮೇಲಿನ ಎಲ್ಲ ಸಾಲುಗಳು ಅನುಮಾನಿಸಲು ಪ್ರಯತ್ನಿಸುತ್ತವೆ. ಪ್ರತಿಯೊಂದು ಅಭಿವ್ಯಕ್ತಿಗಳು ಪುರುಷಾಧಿಕಾರದ ವಿರುದ್ಧ ಕೆಳವರ್ಗಗಳಲ್ಲೇ ಇದ್ದ ಅಷ್ಟೆಯಕೆ ಮಹಿಳೆಯರಲ್ಲೆ ಇದ್ದ ಆಂತರಿಕ ಮೇಲು ಕೀಳಿನ ವಿರುದ್ಧ ಧ್ವನಿ ಎತ್ತುತ್ತವೆ. 'ಪರಮ ಪತಿವ್ರತಿಗೆ ಗಂಡನೊಬ್ಬನೆ' ಗಂಡ ಶಿವಲಿಂಗ ದೇವರ ಭಕ್ತ ಹೆಂಡತಿ ಮಾರಿಮಸಣೆಯ ಭಕ್ತೆ ಗಂಡಕೊಂಬುದು ಪಾದೋದಕ ಪ್ರಸಾದ ಹೆಂಡತಿಕೊಂಬುದು ಸುರೆಮಾಂಸ ಎನ್ನುವಲ್ಲಿ ಪುರುಷು ನೆಲೆಯಲ್ಲಿಯೇ ಪರಿಸ್ಥಿತಿಯನ್ನು ವಚನಕಾರರು ಇಂಥ ಪುರುಷ ನೆಲೆಯ ತಿಳುವಳಿಕೆಗಳನ್ನೆ ಪ್ರಶ್ನಿಸುವ ಮೂಲಕ ತಮ್ಮ ಸಮುದಾಯ ನೆಲೆಗಳ ಸಂವೇದನೆಗಳನ್ನು ಎತ್ತಿ ಹಿಡಿಯುವ ಮೂಲಕ ವೃತ್ತಿ ಮತ್ತು ವ್ಯಕ್ತಿ ಗೌರವವನ್ನು ಸಮರ್ಥಿಸಿಕೊಳ್ಳುತ್ತಾರೆ. 'ಕೊಲುವವನೆ

ಮಾದಿಗ, ಹೊಲಸು ತಿನ್ನುವವನೆ ಹೊಲೆಯ' ಎನ್ನುವ ಪರಿಸರದೊಳಗೆ ಕುರಿಕೋಳಿ ಕಿರುಮೀನುಗಳಂತಹ ಜೀವಂತ ಪ್ರಾಣಿಗಳನ್ನು ತಿನ್ನುವವರು ಉತ್ತಮರು, ಸತ್ತದನ ತಿನ್ನುವವರು ಅಧಮರೆನ್ನುವ ಆಶಯ ಗಳನ್ನು ಸ್ತ್ರೀ ವಚನಕಾರರು ಉಗ್ರವಾಗಿ ಪ್ರತಿಭಟಿಸುವುದನ್ನು ಇಲ್ಲಿ ಕಂಡಿದ್ದೇವೆ. ಬಹು ಸಂಸ್ಕೃತಿಗಳು ಶಿವ ಸಂಸ್ಕೃತಿಯ ನೆರಳಲ್ಲಿ ಬಂದು ಬದುಕಿದರೂ ತನ್ನ ಮೂಲ ವೃತ್ತಿ ಪ್ರವೃತ್ತಿಗಳನ್ನು ಬಿಟ್ಟುಕೊಡದೆ ಸ್ವಾಭಿಮಾನ ಪ್ರದರ್ಶಿಸಿದ ರೀತಿಗಳು ಇಲ್ಲಿ ವ್ಯಕ್ತವಾಗುತ್ತದೆ. ಒಂದು ರೀತಿ ಶಿವ ಸಂಸ್ಕೃತಿ ಮತ್ತು ಶಿವಸಂಸ್ಕೃತಿ ಅಲ್ಲದ ಸಂವೇದನೆಗಳ ನಡುವಿನ ಧರ್ಮಯುದ್ಧವೆಂದು ಇದನ್ನು ಪರಿಭಾವಿಸಬಹುದೆನಿಸುತ್ತದೆ.

## ೪.೪ ವ್ಯಕ್ತಿ ಮತ್ತು ವೃತ್ತಿಗೌರವ

ಭಾರತದ ಸಂದರ್ಭದಲ್ಲಿ ಪ್ರತಿಯೊಂದು ಜಾತಿಗೂ ನಿರ್ದಿಷ್ಟ ಕಸಬು ಮತ್ತು ಸ್ಥಾನಗಳು ನಿರ್ಣಯಿತವಾಗಿದ್ದು ಕಂಡುಬರುತ್ತದೆ. ಉನ್ನತ ಸ್ಥಾನ ಮಾನಗಳು ಉನ್ನತ ಜಾತಿಗಳಿಗೆ ಮೀಸಲಾಗಿದ್ದು ಕಸಬುಗಳೆಲ್ಲಾ ಜಾತಿಯ ವಶದಲ್ಲಿದ್ದವು. ಇಂಥಹ ಸಂದರ್ಭದಲ್ಲಿ ವಚನ ಚಳುವಳಿ ತಲೆದೋರಿ ಸಮಾಜವು ಪ್ರತಿಯೊಂದು ಜೀವಿಗೂ ಸಂಬಂಧಿಸಿದ್ದು ಎಲ್ಲರಿಗೂ ಸಮಾನ ಅವಕಾಶ ಇರಬೇಕು ಎಂದು ಅವರ ಚಟುವಟಿಕೆ ಚಿಂತನೆಗಳಲ್ಲಿ 'ಕಾಯಕ ತತ್ವ' ತಂದು ಎಲ್ಲ ಉದ್ಯೋಗಗಳಿಗೆ ಸಮಾನ ಗೌರವ ತಂದರು. ಇದರಿಂದ ಪುರುಷ ಸ್ತ್ರೀ ಎನ್ನದೇ ಎಲ್ಲರೂ ಕಾಯಕ ಜೀವಿಗಳಾದರು. ಇಲ್ಲಿ ಸ್ತ್ರೀ ಸ್ವಾತಂತ್ರ್ಯ ಸಮಾನತೆಗೆ ಬೆಲೆ ಬಂದಿದ್ದು ಮಹಿಳೆಯರು ಕಾಯಕ ತತ್ವವನ್ನು ಗಂಭೀರವಾಗಿ ಪರಿಭಾವಿಸಿದ್ದರಿಂದಲೇ ಎಂಬಂಶ ವ್ಯಕ್ತವಾಗುತ್ತದೆ.

*'ಲಂಚ ವಂಚನಕ್ಕೆ ಕೈಯಾನದ ಭಾಷೆ*
*ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದಡೆ*
*ಕೈ ಮುಟ್ಟಿ ಎತ್ತಿದೆನಾದಡೆ ಅಯ್ಯ ನಿಮ್ಮಾಣೆ*
*ನೀವಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯ*
*ಶಂಭುಜಕ್ಕೇಶ್ವರ ದೇವಯ್ಯ ನಿಮ್ಮಾಣೆ'*[೨೨]

ಎನ್ನುವ ಸತ್ಯಕ್ಕನು ಸ್ವಂತ ಕಾಯಕದ ಮೇಲೆ ಅಭಿಮಾನ ಹೊಂದಿದ್ದು ಸ್ಪಷ್ಟವಾಗುವದಲ್ಲದೆ ಇದ್ದುದರಲ್ಲಿಯೇ ತೃಪ್ತಿ ಹೊಂದುವ ಗುಣ, ಅತಿ ಆಸೆ ಎಲ್ಲ ಕೆಡಕಿಗೂ ಮೂಲ ಎಂಬಂತಹ ಅಂಶಗಳನ್ನು ಸ್ಪಷ್ಟಪಡಿಸುವದು.

ಹನ್ನೆರಡನೆಯ ಶತಮಾನದಲ್ಲಿ ವ್ಯಕ್ತಿಗಿಂತ ವೃತ್ತಿಗೌರವ ಮುಖ್ಯವಾಗಿತ್ತು. ಕೀಳೆಂದು ಕಡೆಗಣಿತವಾಗಿದ್ದ ವೃತ್ತಿಯಲ್ಲಿ ಜೀವ ಪರವಾದ ಸಂವೇದನೆಗಳನ್ನು ಗೌರವಾಧರಗಳನ್ನು ಕಂಡ ರೀತಿ

ಅಧ್ಬುತ. ಇದು ವೃತ್ತಿಯಾಧಾರಿತ ವರ್ಗೀಕರಣವನ್ನು ತಿರಸ್ಕರಿಸಿ ಕಾಯಕಕ್ಕೆ ಮುಖ್ಯಸ್ಥಾನಮಾನ ತಂದು ಕೊಟ್ಟಿತು. ಪ್ರತಿ ಕಾಯಕ ಘನತರವಾದುದ್ದು ಎಂದು ಹೇಳುವ ಮೂಲಕ ವೃತ್ತಿಯನ್ನೇ ಆತ್ಮಾಭಿಮಾನದ ಸಂಕೇತವನ್ನಾಗಿ ಮಾಡಿತು. ಸಮುದಾಯ ನಿಷ್ಠವಾದ ಈ ಪರಿಸರಲ್ಲಿ ಸಂಪತ್ತಿನ ಕ್ರೂಢೀಕರಣಕ್ಕೆ ಮಹತ್ವವಿಲ್ಲ.

ವಚನಕಾರ್ತಿಯರ ಅದರಲ್ಲೂ ಅಲಕ್ಷಿತ ವಚನಕಾರ್ತಿಯರ ಹೆಸರುಗಳನ್ನು ಗಮನಿಸಿದಾಗ ಅವರು ತಮ್ಮ ವೃತ್ತಿಯ ಬಗೆಗೆ ಯಾವುದೇ ಕೀಳರಿಮೆ ಹೊಂದಿದ್ದಿಲ್ಲ ಎಂಬುದಂತು ಸ್ಪಷ್ಟ. ಉದಾ. ಕದಿರೆ ರೆಮ್ಮವ್ವೆ(ನೇಕಾರ) ಕನ್ನಡಿ ಕಾಯಕದ ರೇವಮ್ಮ,(ಕನ್ನಡಿ ಹಿಡಿಯುವಳು) ಹಾದರ ಕಾಯಕದ ಗಂಗಮ್ಮ(ವೇಶ್ಯೆ) ಬಾಚಿ ಕಾಯಕದ ಪುಣ್ಯಸ್ತ್ರೀ ಕಾಳವ್ವೆ, ಸೂಳೆ ಸಂಕವ್ವೆ(ವೇಶ್ಯೆ) ಕೊಟ್ಟಣದ ಸೋಮವ್ವ (ಅಕ್ಕಿ ಕುಟ್ಟುವವಳು) ಸತ್ಯಕ್ಕ(ಕಸಗೂಡಿಸುವವಳು) ಮುಂತಾದವರು ತಮ್ಮ ಅಸ್ತಿತ್ವವನ್ನೇ ತಮ್ಮ ವೃತ್ತಿಗಳಲ್ಲಿ ಕಂಡುಕೊಂಡಿದ್ದಾರೆ. ಅವರ ವೃತ್ತಿಗಳೆಲ್ಲಾ ಸಾಮಾಜಿಕವಾಗಿ ಕೀಳಾದುದ್ದಾದರೂ ತಮ್ಮ ವಚನಗಳಲ್ಲಿ ಯಾವತ್ತು ತಮ್ಮ ವೃತ್ತಿಗಳು ಕೀಳೆಂದು, ಅತೃಪ್ತಿ ಅಸಂತೋಷಗಳನ್ನು ತೋರಿದ್ದು ಕಾಣುವುದಿಲ್ಲ. ತಮ್ಮ ಹೆಸರುಗಳ ಹಿಂದೆಯೇ ತಮ್ಮ ವೃತ್ತಿಗಳನ್ನು ಸೇರಿಸಿಕೊಂಡಿರುವುದು ಅವರು ವೃತ್ತಿಯನ್ನು ಎಷ್ಟೊಂದು ಗೌರವಿಸುತ್ತಿದ್ದರು ಎಂಬ ಸ್ಪಷ್ಟಕಲ್ಪನೆ ಮೂಡುತ್ತದೆ. ವೃತ್ತಿಯಿಂದ ಸೂಳೆಯಾಗಿದ್ದರೂ ತನ್ನ ವೃತ್ತಿಯಿಂದಲೇ ಆಧ್ಯಾತ್ಮಿಕ ಎತ್ತರಕ್ಕೇರಿದ ಹಾದರ ಕಾಯಕದ ಗಂಗಮ್ಮ ಬಹು ದೊಡ್ಡಮಾದರಿಯಾಗಿದ್ದಾಳೆ. ಕಾಯಕ ಕೀಳಾದರೂ ಮನ ಮುಟ್ಟಿ ಮಾಡಿದಾಗ ಅದು ಸತ್ಪಾತ್ರಕ್ಕೆ ಸಲ್ಲುತ್ತದೆನ್ನುವ ಪ್ರಖರ ವಿಚಾರ ಈ ಕೆಳವರ್ಗದ ವಚನಕಾರ್ತಿಯರ ಬಹುಮುಖ್ಯ ಸಾಕ್ಷಿ ಪ್ರಜ್ಞೆಯಾಗಿದೆ.

'ವೃತ್ತಿಗಳಿಗೆ ಮತ್ತು ವೃತ್ತಿಪರ ಜಾತಿಗಳಿಗೆ ಘನತೆಯೊದಗಿಸಲು ವಚನಕಾರರು ಮಾಡಿದ ಪ್ರಯತ್ನಗಳನ್ನೆಲ್ಲ ಗೌರವದಿಂದ ನೆನೆಯಬೇಕು. ಆದರೆ ಅಂತಿಮವಾಗಿ ವೃತ್ತಿಗಳಿಗೂ ಜಾತಿಗಳಿಗೂ ಇದ್ದ ನಂಟಿನ ಬಳ್ಳಿಯನ್ನು ಕತ್ತರಿಸಲು ವಚನಕಾರರಿಗೂ ಸಾಧ್ಯವಾಗಲಿಲ್ಲ. ಆಯಾ ವೃತ್ತಿಪರ ಜಾತಿಗಳು ತಂತಮ್ಮ ವೃತ್ತಿಗಳನ್ನು ಆತ್ಮವಿಶ್ವಾಸದಿಂದ ಮಾಡಲು ಸಾಧ್ಯವಾಯಿತು. ಹರಡಿ ಹೋಗಿದ್ದ ವೃತ್ತಿಪರ ಜಾತಿಗಳನ್ನು ಶಿವಭಕ್ತಿಯ ಚೌಕಟ್ಟಿನೊಳಗೆ ತರಲಾಯಿತು.'[೨೨] ಆದರೆ ಇಂದಿಗೂ ಕೂಡಾ ವೃತ್ತಿಶ್ರೇಣಿಕರಣವು ವೀರಶೈವ 'ಜಾತಿ'ಗಳಲ್ಲಿ ಬೆಳೆದುಕೊಂಡು ಬಂದಿರುವುದು ದುರಂತವೇ ಸರಿ.

ವೈದಿಕ ಧರ್ಮವು ದುಡಿಮೆಯನ್ನು ಕೀಳೀಕರಿಸಿತ್ತು ಮತ್ತು ಅದನ್ನು ಒಂದು ವರ್ಗದ ಮೇಲೆ ಕಡ್ಡಾಯಗೊಳಿಸಿತ್ತು. ಇಂತಹ ಸಂದರ್ಭದಲ್ಲಿ ತಂತಮ್ಮ ವೃತ್ತಿಗಳನ್ನು ಪವಿತ್ರ ಭಾವನೆಯಿಂದ ಅಭಿಮಾನದಿಂದ ಮುಂದುವರಿಸುವ ವಾತಾವರಣವನ್ನು ಈ ಚಳುವಳಿ ನಿರ್ಮಿಸಿತು. ಸೂಳೆ ಸಂಕವ್ವೆಯಂತಹ ವಚನಕಾರ್ತಿ ವೃತ್ತಿಯಿಂದ ಸೂಳೆಯಾಗಿದ್ದರೂ ಆಧ್ಯಾತ್ಮಿಕ ಸಿದ್ಧಿ ಮತ್ತು ಸಾಧನೆಯ ಮೇಲೆ ಬೆಳಕು ಚೆಲ್ಲುವ ಆಕೆಯ ವಚನ ಮಹತ್ವಪೂರ್ಣವಾದುದು.

*'ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ, ಹಿಡಿದಡೆ ಬೆತ್ತಲೆ ನಿಲಿಸಿ ಕೊಲುವರಯ್ಯ*
*ಕಾದಕತ್ತಿಯಲ್ಲಿ ಕೈಕಿವಿ ಮೂಗ ಕೊಯ್ವರಯ್ಯ*
*ಒಲ್ಲೆ ನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ'*[೨೮]

ಎನ್ನುವಲ್ಲಿ ತನ್ನ ವೃತ್ತಿ ಬಗೆಗೆ ಆಕೆಗೆ ಗೌರವಾದರಗಳಿವೆ. ಸೂಳೆಯಾದವಳು ಸಹ ವೃತ್ತಿ ಗೌರವ ಮೆರೆಯುತ್ತ ಭಕ್ತರ ನಿಷ್ಠೆಯನ್ನು ಹೇಳುವ ಆಕೆಯ ವಚನ ಅನಾಚಾರಿ ಕಪಟಿಗಳಿಗೆ ಚಾಟಿ ಏಟಿನಂತಿದೆ. ತನ್ನ ವೃತ್ತಿ ಜೀವನದ ನೈತಿಕತೆಯನ್ನು ವಿವರಿಸುವ ರೀತಿ ಆಕೆಯ ಆತ್ಮವಿಶ್ವಾಸದ ಪ್ರತೀಕ. ಈ ಸಂಗತಿಗಳು ಕೆಳಜಾತಿಯ ಸ್ತ್ರೀಯರ ಪ್ರಗತಿಗಾಮಿ ನಿಲುವುಗಳನ್ನು ಎತ್ತಿ ತೋರುವವು. 'ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಲ್ಲ, ವ್ರತ ಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ'[೨೯] ಎನ್ನುವ ಕೊಟ್ಟಣದ ಸೋಮವ್ವ ಲಿಂಗ, ಜಾತಿ, ವರ್ಗಗಳ ಬಗ್ಗೆ ಅಂದಿನ ತಮ್ಮ ಕಾಲಕಿದ್ದ ಅಳುಕು, ಸಂಕೋಚ, ನಾಚಿಕೆಗಳನ್ನು ಕಿತ್ತೊಗೆದು ಸ್ವಾಭಿಮಾನ ಬೆಳೆಸಿಕೊಂಡು ದಿಟ್ಟವಾಗಿ ನಿಂತ ಮನೋಧರ್ಮ ಎದ್ದು ತೋರುವುದಲ್ಲದೆ ಪರರ ಕಣ್ಣು ತಪ್ಪಿಸಿ ತಿಂದರೆ ಮಾನಪ್ರಾಣಕ್ಕೆ ಮೂಲ ಎಂಬುದನ್ನು ಅರುಹಿ ತಮ್ಮ ವೃತ್ತಿಯ ಬಗೆಗೆ ಗೌರವ ಹೆಮ್ಮೆ ಪ್ರದರ್ಶಿಸಿದ್ದು ಬಹುಮುಖ್ಯ.

*'ಅಸಿ ಮಸಿ ಕೃಷಿ ವಾಣಿಜ್ಯ ವಾಚಕ ಭಕ್ತ ಪಡುಗ*
*ಪಾದ ಪ್ರಾಣ ಪಹರಿ ಬಾಗಿಲು ಬೊಕ್ಕಸ ಬಿಯಗ'*[೩೦]

ಎನ್ನುವ ಅಕ್ಕಮ್ಮ ವೃತ್ತಿಗಳ ಸಮಾನತೆಯನ್ನು ಕಾಯಕದ ಮಹತ್ವವನ್ನು ಎತ್ತಿತೋರಿರುವಳು. ಇಲ್ಲಿ ನೆಲೆಗೊಂಡ ಶ್ರೇಣೀಕರಣವನ್ನು ಮುರಿದು ಕಟ್ಟುವ ಪ್ರಯತ್ನ ಮಾಡಿದ್ದಾರೆ.

'ಕೈತಪ್ಪಿ ಕೆತ್ತಲು ಕಾಲಿಗೆ ಮೂಲ, ಮಾತು ತಪ್ಪಿ ನುಡಿಯಲು ಬಾಯಿಗೆ ಮೂಲ,[೩೧] ಬಾಚಿಕಾಯಕದ ಕಾಳವ್ವೆ ತನ್ನ ವೃತ್ತಿ ನೆಲೆಯಿಂದಲೇ ಮಾತನಾಡುವ ರೀತಿ ಮೆಚ್ಚುವಂತಹದ್ದು. 'ದೂಪದ ಹೊಗೆ ಎತ್ತಹೋದಡೂ ಸರಿ ಇದು ಸತ್ಯವೆಂದೆ ನಾಸ್ತಿನಾಥ' ದೂಪದ ಗೊಗ್ಗವ್ವೆ ಎಂದೇ ಹೆಸರಾದ ಈ ವಚನಕಾರ್ತಿಯ ವೃತ್ತಿ ಗೌರವ, ಅಭಿಮಾನಗಳು ಮಹೋನ್ನತವಾದವುಗಳಾಗಿವೆ.

'ಆವ ಕಾಯಕ ಮಾಡಿದರೂ ಒಂದೇ ಕಾಯಕವಯ್ಯ' ಎನ್ನುವ ಗಂಗಮ್ಮ ವೃತ್ತಿಯಾಧಾರಿತ ವರ್ಗೀಕರಣವನ್ನು ತಿರಸ್ಕರಿಸಿದ್ದು ಮುಖ್ಯ. ವೃತ್ತಿ ಸಮಾನತೆ ಮೆರೆದ ಹಾದರ ಕಾಯಕದ ಗಂಗಮ್ಮನಿಗೆ ಪುಣ್ಯಸ್ತ್ರೀ ಎಂದು ಸಂಬೋಧಿಸಿರುವುದು ಗಮನಾರ್ಹ ಉವಾಚವಾಗಿದೆ. ವಚನಕಾರ್ತಿಯರೆಲ್ಲ ಸರ್ವಸಂಘ ವಿಚಾರಗಳಿಗೆ ಪ್ರತಿಯಾಗಿ ಶ್ರಮದ ಘನತೆ, ಕಸುಬುಗಾರಿಕೆಯ ಮಹತ್ವ, ಆತ್ಮ ಗೌರದಂತಹ ವಿಚಾರಗಳನ್ನು ಬಳಕೆಗೆ ತಂದರು. ವೃತ್ತಿಗಳೆಲ್ಲ ಲಾಭದಾಯಕ ಉದ್ಯೋಗಗಳ ಸೆಳೆತಕ್ಕೆ ಸಿಕ್ಕು ಸಮಾಜ ವಿಘಟಿತವಾಗುವದನ್ನು ಖಂಡಿಸಿ ವೃತ್ತಿ ಸಮಾನತೆ ತರಲು ವಚನಕಾರ್ತಿಯರು ತಳೆದ ನಿಲುವು ಅತ್ಯಂತ ಮಹತ್ವ ಪೂರ್ಣವಾದುದು. ವಚನಕಾರ್ತಿಯರು ಇಷ್ಟೆಲ್ಲ ವೃತ್ತಿ ಪ್ರವೃತ್ತಿಗಳ ಬಗ್ಗೆ ಆತ್ಮಾಭಿಮಾನದಿಂದ ನುಡಿದರೂ ಸಹ ವಚನ ಕಾಲದೊಳಗೆ ಕೆಳಗಿನ ವೃತ್ತಿಗಳ ಬಗ್ಗೆ ಉಪೇಕ್ಷಿತ ನೆಲೆಗಳು ಇದ್ದದ್ದು ಗೊತ್ತಾಗುತ್ತದೆ. 'ಸೂಳೆಯ ಮಗ ಮಾಳವ ಮಾಡಿದರೆ.... ಎನ್ನುವ ಮಾತಾಗಲೀ, ಕೂಸುಳ್ಳ ಸೂಳೆ ಧನದಾಸೆಗೊತ್ತಿಯ ಕೊಂಡಡೆ ಕೂಸಿಂಗಲ್ಲ ಬೋಜಗಂಗಲ್ಲ ಎನ್ನುವ ಮಾತುಗಳಾಗಲೀ ಕೆಳವೃತ್ತಿಗಳನ್ನು ಕೀಳಿಂದು ಪರಿಗಣಿಸಿದಂತೆ ಕಾಣುತ್ತವೆ. ಇಂಥ ಆಂತರಿಕ ಒತ್ತಡದ ಮಧ್ಯೆಯೂ ತಮ್ಮ ವೃತ್ತಿಯಲ್ಲಿಯೇ ಆತ್ಮಾಭಿಮಾನ ಸಾಧಿಸಿದ ಆತ್ಮೋದ್ಧಾರ ಕಂಡ ಸೂಳೆ ವೃತ್ತಿಯ ವಚನಕಾರ್ತಿಯರ ನಿಲುವು ತುಂಬ ಪ್ರಗತಿಗಾಮಿಯಾದದ್ದು. ವೃತ್ತಿಯ ಕೀಳರಿಮೆಯಿಂದ ಸಾಯದೆ ಅದನ್ನು ಆತ್ಮಾಭಿಮಾನದ ಸಾಧನವನ್ನಾಗಿ ಗ್ರಹಿಸಿದ ರೀತಿ ಅಭ್ಯಾಸಾರ್ಹವಾದದ್ದು.

## ೪.೫. ಪ್ರತೀಮಾಲೋಕ

ಪ್ರತಿಮೆ ಅಪೂರ್ವವಾದ ಇಂದ್ರಿಯ ಸಂಬಂಧ ಹೊಂದಿದ ಒಂದು ಮಾನಸಿಕ ಘಟನೆ. ಚಿನ್ಹೆ, ಸಂಕೇತ, ಪ್ರತೀಕ, ಪ್ರತಿಮೆ ಇವು ಅಭಿವ್ಯಕ್ತಿ ವಿಧಾನವನ್ನು ಸೂಚಿಸುವ ಪದಗಳು ವಚನಗಳಲ್ಲಿ ಪ್ರತಿಮೆಗಳು ಪ್ರಮುಖವಾಗಿ ಮಾನವ ಜೀವನದ ಸ್ವಾಭಾವಿಕತೆ ಹಾಗೂ ಜೀವಂತಿಕೆಯ ಸಂಕೇತಗಳಾಗಿ ಮೂಡಿ ಬಂದಿವೆ. ಜನ ಜೀವನದ ದೈನಂದಿನ ಅನುಭವಗಳನ್ನು ಬಿಂಬಿಸುವ ಈ ಪ್ರತಿಮೆಗಳು ವಚನ ಸಾಹಿತ್ಯದ ಸಾಗರದಲ್ಲಿ ಸಹಜವಾಗಿ ಉಕ್ಕಿ ಬರುವ ಅಸಂಖ್ಯಾತ ತೆರೆಗಳಂತಿವೆ.

ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಅಧೋಗತಿಗಿಳಿದ ಜನಾಂಗಕ್ಕೆ ತಲೆಯೆತ್ತಲು ತಾಕತ್ತು ತಂದು ಕೊಟ್ಟಿದ್ದಲ್ಲದೆ ಹೃದಯ ಬಿಚ್ಚಿ ಮಾತನಾಡಲು ಸಹಕರಿಸಿತು. ಇವರಿಗೆ ತಮ್ಮ ವೃತ್ತಿ ಗೌರವ ಅಭಿಮಾನವಿದ್ದು ತಮ್ಮ ನಿತ್ಯ ಅನುಭವಗಳ ಹಿನ್ನೆಲೆಯಲ್ಲಿಯೇ ಯಾವ ಪದಗಳು ಅಸ್ಪೃಶ್ಯವಾಗಿ ಉಳಿದುಕೊಂಡು ಸಾಹಿತ್ಯವೆಂದರೆ ಶಿಷ್ಟರ ಮೇಲ್ವರ್ಗದವರ ಸ್ವತ್ತು ಎಂದು ಭಾವಿಸಿದ್ದರೋ

ಅಂತವರಿಗೆ ತಕ್ಕ ಪಾಠಕಲಿಸಿ ಅಸ್ಪೃಶ್ಯವಾಗಿ ಉಳಿದ ಪದಗಳಾದ ನಾಯಿ, ಕತ್ತೆ, ತೊಬರನ ಕೊಳ್ಳಿ, ರಾಟೆ, ಅಕ್ಕಿ, ಲಾಳಿ, ಹಂದಿ, ನೆಲ್ಲು, ಮಣ್ಣು, ಕನ್ನಡಿ ಇತ್ಯಾದಿ ಪ್ರಾಣಿ ವಸ್ತುಗಳನ್ನು ಪ್ರತಿಮೆಯಾಗಿ ಸಾಹಿತ್ಯ ಕ್ಷೇತ್ರಕ್ಕೆ ಪರಿಚಯಿಸಿದ ರೀತಿ ಅದ್ಭುತವಾದದ್ದು.

ವಚನಕಾರ್ತಿಯರು ತಮ್ಮ ವಚನಗಳಲ್ಲಿ ಉಪಮಾನ, ರೂಪಕ, ಸಾದೃಶ್ಯ ಪ್ರತಿಮೆಗಳನ್ನು ಬಳಸಿದ್ದು ಇವು ವಚನಗಳ ಅರ್ಥದ ಆಳವನ್ನು ಹೆಚ್ಚಿಸಿವೆ. ಇವು ಒಂದಕ್ಕೊಂದು ನೇರ ಸಂಬಂಧ ಹೊಂದಿ ಅನುಭವದ ರೂಪ ಧರಿಸಿ ಒಂದು ಅದ್ಭುತ ಪ್ರತಿಮಾಲೋಕವನ್ನು ನಮ್ಮೆದುರಿಗೆ ನಿಲ್ಲಿಸುತ್ತದೆ. 'ಪ್ರತಿಮೆ ಎಂದರೆ ಭಾವ ಸೌಂದರ್ಯ ಒಳಗೊಂಡ ಒಂದು ಶಬ್ದ ಚಿತ್ರ, ಸ್ತಬ್ಧ ಚಿತ್ರವಲ್ಲ, ಇದು ನಿರಂತರ ಚಲನಶೀಲ ಅಮೂರ್ತ ಭಾವನೆಗಳಿಗೆ ಮೂರ್ತರೂಪಕೊಡುವ ರೂಪಾಧಾರಣ ಕ್ರಿಯೆಯೇ'[೨೮] ಆಗಿದೆ.

*'ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ*
*ಅಡಿಯ ಹಲಗೆ ಬ್ರಹ್ಮ,ತೋರಣ, ವಿಷ್ಣು*
*ನೆಲದ ಬೊಂಬೆ ಮಹಾರುದ್ರ'*[೨೯]

ಅನುಭಾವದ ನೂಲು ತೆಗೆಯುವ ಕದಿರೆ ರೆಮ್ಮವ್ವೆಯ ರಾಟೆಯ ಬೇರೆ, ಕದಿರು, ಅಡಿಯ ಹಲಗೆ, ನೂಲು ಪ್ರತಿಮೆಗಳು ಆಧ್ಯಾತ್ಮವನ್ನು ಕಾಯಕದ ಜೊತೆ ಸಮ್ಮಿಳಿತಗೊಳಿಸಿದ್ದಾಳೆ.

'ಕದಿರು ಮುರಿಯೆ ಏನೂ ಇಲ್ಲ
ವ್ರತ ಹೀನನ ನೆರೆಯಲಿಲ್ಲ ಗುಮ್ಮೇಶ್ವರಾ'[೩೦]

ಇಲ್ಲಿ ಕದಿರೆ ಕಾಯಕದ ಕಾಳವ್ವೆ ಕದಿರಿನ ಪ್ರತಿಮೆಯನ್ನು ನೀಡಿರುವಳು,'ತೊಬರನ ಕೊಳ್ಳಿಯಂತ ಉರಿವಾತ ಭಕ್ತನೆ' ಉಪೇಕ್ಷಿತ ನೆಲೆಯಿಂದಲೆ ಕಾಣಿಸಿಕೊಂಡ ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ತೊಬರನ ಕೊಳ್ಳಿಯನ್ನೇ ಪ್ರತಿಮೆಯಾಗಿಸಿ ಭಕ್ತರ ಇರವನ್ನು ಅರುಹಿದ ವೈಖರಿ ಮೆಚ್ಚುವಂತಹದ್ದು.

*'ಚಿನ್ನ ವಿಶೇಷ ಮಣ್ಣು ಅಧಮವೆಂದಡೆ*
*ಅದು ನಿಂದು ಕರಗುವದಕ್ಕೆ ಮಣ್ಣಿನ ಕೋವೆಯೇ ಮನೆಯಾಯಿತ್ತು'*

ಎನ್ನುವ ಮೇರೆ ಮಿಂಡಯ್ಯ ಕೀಳಿಕರಿಸಲ್ಪಟ್ಟ ಮಣ್ಣು ಸಹ ಚಿನ್ನಕ್ಕೆ ಬೇಕಾಯಿತು ಎಂಬ ಸತ್ಯವನ್ನು ಸ್ಪಷ್ಟೀಕರಿಸುತ್ತಾನೆ. 'ಕೈಯಲ್ಲಿ ಕನ್ನಡಿ ಇರಲು ತನ್ನ ತಾ ನೋಡಬಾರದೆ' ಕನ್ನಡಿ ಕಾಯಕದ ರೇವಮ್ಮ ಕನ್ನಡಿಯನ್ನೆ ಪ್ರತಿಮೆಯಾಗಿಸಿಕೊಂಡು ಪರರಿಗೆ ಬೋಧೆಯ ಹೇಳುವಾಗ ಮೊದಲು ಆತ್ಮಾವಲೋಕನ ಮುಖ್ಯ ಎಂಬಂಶ ವ್ಯಕ್ತಗೊಳ್ಳುವುದು. 'ಹಸಿವೆಂಬ ಹೆಬ್ಬಾವು ಬಸಿರ ಬಂದ ಹಿಡಿದಡೆ ವಿಷವೇರಿತ್ತಯ್ಯ ಆಪಾದ ಮಸ್ತಕಕ್ಕೆ'[೩೧] ಎನ್ನುವಲ್ಲಿ ಪ್ರತಿಮೆಗಳನ್ನು ಅರ್ಥಪೂರ್ಣವಾಗಿ ಬಳಸಿದ ದಾಸಿಮಯ್ಯನಲ್ಲಿ

ಹಸಿವು ತೀವ್ರತರವಾಗಿದ್ದು ಅಂದು ಕಾಡುತ್ತಿರುವ ಹಸಿವಿನ ಕೂಗು ಇಂದಿಗೂ ಪ್ರಸ್ತುತ ಇಲ್ಲಿ ಹಸಿವು, ಹಾವು, ಬಸಿರು ಇವು ಪ್ರತಿಮೆಗಳಾಗಿದ್ದು ಇವು ಅವರ ಬದುಕಿನ ಅನುಭವಗಳನ್ನು ಅಭಿವ್ಯಕ್ತಿಸುವವು. ಇವರು ಬದುಕಿಗೂ ಬರಹಕ್ಕೂ ನೇರ ಸಂಬಂಧವುಳ್ಳವರು. ತಮ್ಮ ಬದುಕಿನ ಅನುಭವಗಳಿಗೆ ರೂಪಕ ಕೊಟ್ಟು ಪ್ರತಿಮೆಗಳನ್ನಾಗಿ ಮಾಡಿದ್ದಾರೆ.

*'ಮರನನೇರಿ ಹಣ್ಣನರಸ ಹೋದಡೆ*
*ಮರ ಮುರಿದು ಬಿದ್ದ ಮಾನವನಂತೆ*
*ಕೆಸರಿನೊಳಗಣ ಹುಲ್ಲ ಮೇಯ ಹೋದ ಪಶುವಿನಂತೆ*
*ಕೊಂಬೆ ಕೊಂಬೆಗೆ ಹಾರುವ ಕೊಡುಗನಂತೆ*
*ಉಂಡ ಮನೆ ಮಾರುವ ಒಡೆಕಾರನಂತೆ*
*ಹಳ್ಳಿ ಹಳ್ಳಿ ತಿಬ್ಬಳ್ಳಿ ತಿರುಗುವ ಒಳ್ಳವಿನಂತೆ*
*ಮಾತಿನಲ್ಲಿ ಬ್ರಹ್ಮವ ನುಡಿ ವೇಷಧಾರಿಗಳ ಲಿಂಗಾಗಿಗಳೆಂದಡೆ*
*ಮಾರಿಗೆ ತಂದ ಹಂದಿಯ ನಾಯಿ ನರಿ ತಿಂಬಂತೆ ಕಾಣಾ ಅಮುಗೇಶ್ವರಾ'*[30]

ಅಮುಗೆ ರಾಯಮ್ಮನು ಈ ವಚನದಲ್ಲಿ ಕೊಟ್ಟ ಮರ, ಹಣ್ಣು, ಹುಲ್ಲು, ಪಶು, ಹಳ್ಳಿ, ಕೊಡುಗ, ಈ ಎಲ್ಲ ಪ್ರತಿಮೆಗಳೂ ಅರ್ಥಪೂರ್ಣವಾಗಿವೆ. ಅಲೌಕಿಕ ಅನುಭಾವವನ್ನು ಲೋಕಾನುಭವದ ಮೂಲಕ ಅಭಿವ್ಯಕ್ತಿಸಿದ ವಚನಕಾರ್ತಿಯರ ರೀತಿ ಮಹತ್ವದ್ದಾಗಿದೆ.

ಅಲಕ್ಷಿತ ವಚನಕಾರ್ತಿಯರ ವಚನಗಳಲ್ಲಿ ಮೇಲ್ವರ್ಗದವರಿಗಿಂತ ವಿಭಿನ್ನ ಸ್ವರೂಪ ಆಶಯ ಮತ್ತು ನಿರ್ಭಿಡೆಯ ಅಭಿವ್ಯಕ್ತಿಯ ಮಾರ್ಗ ಹೊಂದಿದ್ದು ಗೋಚರಿಸುವದಲ್ಲದೆ ವೃತ್ತಿ ಸಮಾನತೆ, ಜಾತಿ ಮುಕ್ತ ಸಮಾಜ, ಆರ್ಥಿಕ ಸಮಾನತೆ, ಲಿಂಗ ಸಮಾನತೆ, ವೃತ್ತಿ ಗೌರವ ಮೆರೆದು ಕಾಯಕದಿಂದಲೆ ಮುಕ್ತಿ ಎಂದು ನುಡಿದು ನಡೆದ ಅನುಭವದ ವಚನಗಳು ಪ್ರಸ್ತುತ ಸಮಾಜಕ್ಕೆ ಅವಶ್ಯ. ಸದಾ ಸಂಕೀರ್ಣಗೊಂಡು ಹೇಯವಾದ ಕೃತ್ಯವೆಸಗುವ ಇಂದಿನ ವರ್ತಮಾನದ ಬದುಕಿಗೆ ಅವರು ತಳೆದ ಪ್ರಗತಿಗಾಮಿ ನಿಲುವುಗಳು ಆದರ್ಶನೀಯವಾಗಿವೆ. ನಿಸರ್ಗವಿಮುಖವಾಗುತ್ತಿರುವ ಬದುಕನ್ನು ತಮ್ಮ ಪ್ರತಿಮಾಲೋಕದ ಮೂಲಕ ನಿಸರ್ಗ ಮುಖಿಗೊಳಿಸಿದರು. ಲೋಕದ ಮೂರ್ತ ಕಲ್ಪನೆಯ ಮೂಲಕ ಅಮೂರ್ತದ ಕಾಣ್ಕೆಯನ್ನು ಕಂಡರು. ಸಮುದಾಯ ಸಂಸ್ಕೃತೀಯ ಜೀವಂತ ನೆಲೆಗಳಾದ ಒಗಟು, ಗಾದೆ, ನುಡಿಗಟ್ಟುಗಳನ್ನು ವೃತ್ತಿ ಪರಿಕರ ಹಾಗೂ ಪರಿಭಾಷೆಗಳನ್ನು ತಮ್ಮ ಅನುಭಾವಿಕ ನೆಲೆಯ ವಿಶ್ಲೇಷಣೆಗೆ ಬಳಸಿಕೊಳ್ಳುವ ಮೂಲಕ ಅದಕ್ಕೊಂದು ಘನತೆಯನ್ನು ತಂದುಕೊಟ್ಟರು. ಇಹ ಬದುಕಿನ ಸಂಪದ್ಭರಿತತೆಯನ್ನು ಅರ್ಥಪೂರ್ಣವಾಗಿಸಿದರು. ಹೀಗೆ ಘನವನ್ನು ವಿಸ್ತರಿಸಲು, ಅರ್ಥೈಸಿಲು ವಚನಕಾರ್ತಿಯರು ದಿನ ಬದುಕಿನ ಲಘು ವಿಧ್ಯಮಾನಗಳನ್ನು ಬಳಸಿಕೊಳ್ಳುವ

ಮೂಲಕ ತಮ್ಮ ಸಾಂಸ್ಕೃತಿಕ ಸಂವೇದನೆಗಳನ್ನು ಜೀವಂತಗೊಳಿಸಿದರು. ಈ ಜೀವಂತಿಕೆಯೇ ಅವರನ್ನು ಪ್ರಗತಿಗಾಮಿಗಳನ್ನಾಗಿಸಿತು ಎನ್ನುವುದನ್ನು ಮರೆಯಬಾರದು.

ವ್ಯಕ್ತಿ ನೆಲೆಯಿಂದ ಸಮುದಾಯ ನೆಲೆಯತ್ತ ಚಲಿಸುವ ದಾರಿಯಲ್ಲಿ ಎದುರಾದ ಕೌಟುಂಬಿಕ ಸಾಮಾಜಿಕ ಹಾಗೂ ಚಳುವಳಿಯೊಳಗೆ ಇದ್ದ ಆಂತರಿಕ ಅಸಮಾನತೆಗಳ ವಿರುದ್ಧ ವೈಚಾರಿಕ ಸಮರವನ್ನೇ ಸಾರಿದರು. ಆ ಮೂಲಕ ವ್ಯಕ್ತಿ ಸ್ವಾತಂತ್ರ್ಯ ಹಾಗೂ ಅಭಿವ್ಯಕ್ತ ಸ್ವಾತಂತ್ರ್ಯವನ್ನು ದಕ್ಕಿಸಿಕೊಂಡರೆಂದು ಹೇಳಬಹುದು.

**ಅಡಿ ಟಿಪ್ಪಣಿಗಳು**

೧. ಎಂ.ಎಂ.ಕಲಬುರ್ಗಿ (ಸಂ) **ಸಮಗ್ರ ವಚನ ಸಂಪುಟ**-೧ ಪು-೩೭೮ ೧೯೯೩ ವ-೧೧೭೧

೨. **ಓ.ವಿ.ನಾರಾಯಣ ವಚನ ನಿರ್ವಚನ** ಪು-೧೫೯ ೧೯೯೦

೩. **ಓ.ವಿ.ನಾರಾಯಣ ವಚನ ನಿರ್ವಚನ** ಪು-೧೫೬ ೧೯೯೦

೪. ಎಸ್.ವಿದ್ಯಾಶಂಕರ(ಸಂ) **ಸಮಗ್ರ ವಚನ ಸಂಪುಟ**-೭, ಪು-೪೨೬; ೧೯೯೩ ವ-೧೩೦೨

೫. ಬಿ.ಆರ್.ಹಿರೇಮಠ(ಸಂ) **ಸಮಗ್ರ ವಚನ ಸಂಪುಟ**-೮

೬. ವೀರಣ್ಣ ರಾಜೂರ (ಸಂ) **ಸಮಗ್ರ ವಚನ ಸಂಪುಟ** ೫, ಪು-೧೮೩;೧೯೯೩, ವ-೫೬೮

೭. --------"----- ಪು-೧೯೪;೧೯೯೩ ವ-೬೦೭

೮. --------"----- ಪು-೮೪೬;೧೯೯೩ ವ-೮೪೮

೯. --------"----- ಪು-೨೧೩;೧೯೯೩ ವ-೬೬೬

೧೦. --------"----- ಪು-೩೧೬;೧೯೯೩ ವ-೯೮೭

೧೧. ಎಂ.ಎಂ.ಕಲಬುರ್ಗಿ(ಸಂ) **ಸಮಗ್ರ ವಚನ ಸಂಪುಟ** ೧, ಪು-೪೯;೧೯೯೩, ವ-೧೯೪

೧೨. ವೀರಣ್ಣ ರಾಜೂರ(ಸಂ) **ಸಮಗ್ರ ವಚನ ಸಂಪುಟ** ೫, ಪು-೩೩೯; ೧೯೯೩, ವ-೧೦೪೨

೧೩. ಜಿ.ಎಸ್.ಶಿವರುದ್ರಪ್ಪ, **ಕನ್ನಡ ಸಾಹಿತ್ಯ ಸಂದರ್ಭ**, ೧೯೯೦

೧೪. ಶೈಲಜಾ ಉಡಚಣ, ವಚನಕಾರರ ದೃಷ್ಟಿಯಲ್ಲಿ ಸ್ತ್ರೀ ಪು.೨೮, ೧೯೯೧

# ಅಧ್ಯಾಯ ೫

# ಅಲಕ್ಷಿತ ವಚನಕಾರ್ತಿಯರ ಪ್ರತಿಭಟನಾ ಧ್ವನಿಗಳು

೫.೧. ಯಜಮಾನ ಸಂಸ್ಕೃತಿಯ ವಿರುದ್ಧ

೫.೨. ಕೌಟುಂಬಿಕ ಪುರುಷಾಧಿಕಾರದ ವಿರುದ್ಧ

೫.೩. ಪ್ರತಿಗಾಮಿಶಕ್ತಿಗಳ ವಿರುದ್ಧ

೫.೪. ವ್ಯಕ್ತಿ ಮತ್ತು ಆಂತರಿಕ ದ್ವಂದ್ವಗಳ ವಿರುದ್ಧ

೫.೫. ಆಂದೋಲನದೊಳಗಿನ ಆಂತರಿಕ ಛಿದ್ರತೆಗಳು

## ೫.೧. ಯಜಮಾನ ಸಂಸ್ಕೃತಿಯ ವಿರುದ್ಧ

'ಸಂಸ್ಕೃತಿ ಎಂದರೆ ಅದೊಂದು ಜೀವನ ವಿಧಾನ. ಒಂದು ಜನ ಸಮೂಹದ ಜೀವನ ವಿಧಾನವೇ ಆ ಸಮಾಜದ ಸಂಸ್ಕೃತಿ, ಎಂದರೆ ಜನ ಸಮೂಹದ ಬದುಕಿನ ವಿಧಿ ಆಚರಣೆಗಳು ರೀತಿ ನೀತಿಗಳು ಇವೆಲ್ಲವುಗಳನ್ನೊಳಗೊಂಡು ಅರ್ಥೈಯಿಸುವ ಪದವೇ ಸಂಸ್ಕೃತಿ'[1] ಸಂಸ್ಕೃತಿ ಮನೋವಿಕಾಸಕ್ಕೆ ಸಂಬಂಧಿಸಿದ ಚಟುವಟಿಕೆ, ಅದು ಅಂತರಂಗದ ಫಲ. ಸಂಸ್ಕೃತಿ ಎಂಬುದು ಸಮೂಹ ಸಮ್ಮತ ಜೀವನ ಪದ್ಧತಿ ಆಗಿದೆ. ಇದು ಜಗತ್ತಿನಾದ್ಯಂತ ಒಂದೆತೆರನಾಗಿಲ್ಲ ಭಿನ್ನ ಭಿನ್ನ ಭಾಷೆ, ಪ್ರವೇಶ, ಜನಾಂಗಗಳಿದ್ದಾಗ ಅದಕ್ಕನುಗುಣವಾಗಿ ಸಂಸ್ಕೃತಿಗಳು ರೂಪಗೊಳ್ಳುತ್ತವೆ. ಸಂಸ್ಕೃತಿ ಎಂಬುದು ಒಂದು ಪ್ರಕ್ರಿಯೆ. ಸಮಾಜಕ್ಕೆ ಒಂದು ಚಲನಶೀಲತೆ ಇರುವಂತೆ ಸಂಸ್ಕೃತಿಗೂ ಒಂದು ಚಲನಶೀಲತೆ ಇದೆ. ಹೀನ ಪ್ರಕೃತಿಯಿಂದ ಉತ್ತಮ ಪ್ರಕೃತಿಗೆ ಹೋಗುವುದೇ ಸಂಸ್ಕೃತಿ ಆಗಿದೆ. ಇದು ಸ್ಥಗಿತತೆ ಮತ್ತು ಚಲನಶೀಲತೆ ಎರಡನ್ನು ಪಡೆದಿದೆ.

ನಮ್ಮ ಸಂಸ್ಕೃತಿಯನ್ನು ಆರ್ಥಿಕ ನೆಲೆಯಿಂದ ನೋಡಿದರೆ ಜೀವನಕ್ಕೆ ಅವಶ್ಯಕ ಸಾಮಾಗ್ರಿಗಳು ಇರುವವರದೊಂದು ವರ್ಗ. ಇಲ್ಲದಿರುವವರದೊಂದು ವರ್ಗ. ಇದರಾಚೆಗೆ ಜಾತಿಯ ಹಿನ್ನೆಲೆಯಲ್ಲಿ

ಮನುಷ್ಯನ ಸ್ಥಾನ ಮಾನಗಳು ನಿರ್ಧರಿತವಾಗುತ್ತವೆ.[೨] ಇಲ್ಲಿ ಅಧೀನಗೊಂಡಿರುವ ಸಂಸ್ಕೃತಿ ತನ್ನ ವಿರೋಧಿ ನೆಲೆಯಲ್ಲಿರುವ ಸಂಸ್ಕೃತಿಗೆ ಸವಾಲಾಗಿ ಪರಿಣಮಿಸಿವೆ. ಹಣ ಜಾತಿ ಪ್ರಧಾನವಾಗಿಟ್ಟುಕೊಂಡ ಸಂಸ್ಕೃತಿ ಅವನ್ನೇ ತನ್ನ ಮೌಲ್ಯಗಳನ್ನಾಗಿಟ್ಟುಕೊಂಡು ಕೀಳರಿಮೆಗೊಂಡ ವ್ಯವಸ್ಥೆಯ ಅವಜ್ಞೆಗೊಳಗಾದ ಜನರ ಮೇಲೆ ತನ್ನ ಹಿಡಿತವನ್ನು ಸಾಧಿಸುತ್ತಿರುವುದು ಮುಖ್ಯ. ಇಲ್ಲಿ ಯಜಮಾನ ಸಂಸ್ಕೃತಿ 'ಧಿಕ್ಕರಿಸಿದ ಸಮಾಜವನ್ನು ಯಾವಾಗಲೂ ಸುಧಾರಣಾವಾದಿಯಾದ ನೆಲೆಯಲ್ಲಿ ಅರ್ಥೈಸುತ್ತದೆ. ತನ್ನ ಮೌಲ್ಯಗಳನ್ನು ಹೇರುತ್ತಿರುತ್ತದೆ. ತಾನು ಅಭಿವ್ಯಕ್ತಿಸುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಎಲ್ಲೂ ತನ್ನ ಯಜಮಾನಿಕೆಯ ಲಕ್ಷಣಗಳು ಕಾಣದಂತೆ, ಕಂಡರೂ ಅವು ಸಂಪೂರ್ಣವಾಗಿ ಅಧೀನ ಸಂಸ್ಕೃತಿಯ ಮೇಲೆ ಹೆಚ್ಚು ಒತ್ತು ಕೊಟ್ಟಿದೆಯೆಂಬ ಭ್ರಮೆಯನ್ನು ಮೂಡಿಸುತ್ತಿರುತ್ತವೆ. ಇದರಿಂದ ಪ್ರಧಾನ ಸಂಸ್ಕೃತಿಯ ರಚನೆಗಳನ್ನು ಸುಲಭವಾಗಿ ತಳ್ಳಿಹಾಕದಿರುವ ಸ್ಥಿತಿಯನ್ನು ಅಧೀನ ಸಂಸ್ಕೃತಿಯಲ್ಲಿ ಉಂಟುಮಾಡುತ್ತಿದೆ'.[೩]

ಎಲ್ಲ ರೀತಿಯ ಸೌಲತ್ತುಗಳನ್ನು ಪಡೆದ ಯಜಮಾನ ಸಂಸ್ಕೃತಿ ಪ್ರಧಾನವಾಗುತ್ತಲೇ ಮತ್ತೊಂದು ಸಂಸ್ಕೃತಿಯನ್ನು ಅಧೀನಗೊಳಿಸುತ್ತಾ ಹೋಯಿತು. ಈ ಯಜಮಾನ ಸಂಸ್ಕೃತಿಯು ಕಟ್ಟಲ್ಪಟ್ಟ ವ್ಯವಸ್ಥೆಯಿಂದ ಬಿಡುಗಡೆ ಹೊಂದುವುದೇ ಈ ವಚನ ಚಳುವಳಿಯ ಉದ್ದೇಶವಾಗಿತ್ತು. ಅನೇಕ ವಚನಕಾರ ಮತ್ತು ವಚನ ಕಾರ್ತಿಯರಿಂದ ಕೂಡಿದ ಈ ಚಳುವಳಿ ಹೊಸ ಸಂಸ್ಕೃತಿಯೊಂದನ್ನು ಹುಟ್ಟುಹಾಕಿತು. ಈ ರೀತಿಯ ಸಂಸ್ಕೃತಿ ಕಟ್ಟುವಿಕೆ ಎಂದರೆ ಅಧಿಕಾರಸ್ಥ ವ್ಯವಸ್ಥೆಯ ಕಣ್ಣಿನಿಂದ ನಿರಾಕರಣೆಗೊಳಗಾಗಿರುವ, ದುಡಿಯುವ ಜನರ ಲೋಕಕ್ಕೆ ಸಂಬಂಧಿಸಿದ್ದನ್ನು ಹೀನವೆಂದೂ ತನ್ನದ್ದು ಶ್ರೇಷ್ಠವೆಂದೂ ಯಜಮಾನ ಸಂಸ್ಕೃತಿ ಹುಟ್ಟಿಸಿದ ನಂಬಿಕೆಗಳ ಅಪಮೌಲ್ಯೀಕರಣ ಕ್ರಿಯೆಯೇ ಆಗಿದೆ. ಅಪಮೌಲ್ಯೀಕರಣವೆಂದರೆ ಸಮುದಾಯಗಳು ತಮಗೆ ಕೇಡು ಬಯಸುವ ಸಾಂಸ್ಕೃತಿಕ ಆಕೃತಿಗಳನ್ನು ನಿಷ್ಠುರವಾಗಿ ಪ್ರಶ್ನಿಸುವುದು ಹಾಗೂ ಪಾವಿತ್ರೀಕರಿಸಲಾಗಿರುವ ಅಕೃತಿಗಳ ಪಾವಿತ್ರ್ಯನಾಶ ಮಾಡುವುದು. ಆದರೆ ಕೆಡಹುವದರ ಪ್ರಕ್ರಿಯೇ ಪ್ರತಿ ಸಂಸ್ಕೃತಿಯಲ್ಲ. ಇಲ್ಲಿ ಕೆಡಹುವ ಜತೆಯಲ್ಲೆ ಕಟ್ಟುವ ಕ್ರಿಯೆಯೂ ಇರುತ್ತದೆ. ಕಟ್ಟುವುದೆಂದರೆ ಸಮುದಾಯಗಳ ಬಾಳಿನಲ್ಲಿರುವ ಜೀವನ ಪ್ರೀತಿಯ ಅನಂತ ಸಾಧ್ಯತೆಗಳ ಹೊರ ಹೊಮ್ಮುವಿಕೆಯಾಗಿದೆ. ತಿರಸ್ಕೃತವೆನಿಸಿರುವ, ಕೀಳೆನಿಸಿರುವ ಅವರ ಸಾಂಸ್ಕೃತಿಕ ಆಕೃತಿಗಳ ಮೌಲ್ಯೀಖರಣವಾಗಿದೆ.''[೪] ವಚನ ಚಳುವಳಿ ಸ್ವವಿಮರ್ಶೆವುಳ್ಳ ಪ್ರತಿಭಟನೆ. ಅರಸುತನ, ವೇದ ಶಾಸ್ತ್ರಗಳನ್ನು ವಿರೋಧಿಸಿದ ವಚನಕಾರರು ದಲಿತ ಶಿವಭಕ್ತರನ್ನು ಕಂಡ ರೀತಿ ಗಮನಾರ್ಹ.

ಜನಮುಖಿ ಆಶಯಗಳನ್ನು ಅಂತರ್ಗತ ಮಾಡಿಕೊಂಡ ಈ ಚಳುವಳಿ ಒಪ್ಪಿತ ಸಮಾಜದ ಮೌಲ್ಯ ವ್ಯವಸ್ಥೆಯನ್ನು ತಲ್ಲಣಗೊಳ್ಳುವಂತೆ ಮಾಡಿತು. ಯಜಮಾನಿಕೆಯ ಕಲ್ಪನೆಗಳನ್ನು ಒಡೆದೆಸೆದು ತನ್ನ ಜನಾಂಗದ ಕೀಳರಿಮೆಯನ್ನು ತೊಡೆದು ಹಾಕಿ ಸ್ತ್ರೀ ನಿಕೃಷ್ಟಳಲ್ಲವೆಂದು ಆಕೆಯಲ್ಲಿ ಆತ್ಮವಿಶ್ವಾಸ ಬೆಳೆಸಿದ್ದು ಈ ಚಳುವಳಿಯ ಮಹಿಳೆಯರೇ ಎಂದರೆ ತಪ್ಪಲ್ಲ ಯಜಮಾನ ಸಂಸ್ಕೃತಿಯು ಅನೇಕ ಹಂತಗಳಲ್ಲಿ ಸ್ತ್ರೀಯರ ಅನುಭವವನ್ನು ನಿಗ್ರಹಿಸಿದೆ. ಆದರೆ ಅರಿವಿನ ಜಾಗ್ರತಿಯನ್ನು ಅನೇಕ ವಚನಕಾರ್ತಿಯರು ಮಾಡಿದ್ದು ಕಂಡುಬರುತ್ತದೆ.

*'ಒಡೆಯರೆಂಬ ತುಡುಗುಣಿಗಳು ತಾವು ಪೂಜೆಗೊಂಬಲ್ಲಿ*
*ಅವರ ಮನೆಗೆ ಹೂಹಣ್ಣು ಕಾಯಿ ಪತ್ರೆಗಳ ತಾಹ*
*ಹೋಗುವ ಬರುವ ಊಳಿಗವ ಕೊಂಬಾತ ಭಕ್ತನಲ್ಲ*
*ಅಲ್ಲಿ ಪೂಜೆಗೊಂಬಾತ ಜಂಗಮನಲ್ಲ'*[೫]

ಎನ್ನುವ ಕಾಳವ್ವೆ ಒಡೆಯರನ್ನು ತುಡುಗುಣಿಗಳಿಗೆ ಹೋಲಿಸಿದ್ದು ಮುಖ್ಯ. ಶಾರೀರಿಕ ಪೀಡನೆ, ಮಾನಸಿಕ ಹಿಂಸೆ, ಬೌದ್ಧಿಕ ತುಳಿತಗಳಿಂದಾಗಿ ಶತಶತಮಾನಗಳಿಂದ ತುಳಿತಕ್ಕೊಳಗಾದ ಸ್ತ್ರೀ ಪ್ರಭುತ್ವ ವ್ಯವಸ್ಥೆಯನ್ನು ಧಿಕ್ಕರಿಸಿ ಶ್ರೇಣೀಕರಣವನ್ನು ಮುರಿದು ಸಮಾನ ವ್ಯಕ್ತಿತ್ವದ ಆಧಾರದ ಮೇಲೆ ಧಾರ್ಮಿಕ ಪಂಥವನ್ನು ನಿರ್ಮಿಸುವ ಪ್ರಯತ್ನ ಮಾಡಿದಳು.

'ಯಜಮಾನ ಸಂಸ್ಕೃತಿಯ ವಿರುದ್ಧ ಬಂಡೆದ್ದ ಪ್ರಪಂಚದ ಮೊಟ್ಟ ಮೊದಲ ದಿಟ್ಟೆ ಅಕ್ಕಮಹಾದೇವಿ.'[೬] ಅಕ್ಕಮಹಾದೇವಿ ಇಲ್ಲಿ ಎದುರು ಹಾಕಿಕೊಂಡದ್ದು ಒಬ್ಬ ಸಾಮಾನ್ಯ ಪುರುಷನನ್ನಲ್ಲ, ಒಬ್ಬ ರಾಜನನ್ನು, ಇಡೀ ರಾಜ ಸಂಸ್ಕೃತಿಯನ್ನೆ ವಿರೋಧಿಸಿದ್ದು ಸಾಮಾನ್ಯವೇನಲ್ಲ, ರಾಜಾಜ್ಞೆಯ ಮೂಲಕ ಇಡೀ ವ್ಯವಸ್ಥೆಯನ್ನೇ ದಂಡಿಸುವಂತ ಪರಮಾಧಿಕಾರ ಹೊಂದಿದ್ದ ಕೌಶಿಕನನ್ನು ಒಬ್ಬ ಸ್ತ್ರೀ ಪ್ರಶ್ನಿಸುವುದೆಂದರೆ?

*'ಎಮ್ಮೆಗೊಂದು ಚಿಂತೆ, ಸಮಗಾರಗೊಂದು ಚಿಂತೆ*
*ಧರ್ಮಿಗೊಂದು ಚಿಂತೆ, ಕರ್ಮಿಗೊಂದು ಚಿಂತೆ*
*ಎನಗೆ ಎನ್ನ ಚಿಂತೆ, ನಿನಗೆ ನಿನ್ನ ಕಾಮದ ಚಿಂತೆ*
*ಒಲ್ಲೆ ಹೋಗು ಸೆರಗ ಬಿಡು ಮರುಳೆ'*[೭]

ಪ್ರಭುತ್ವವನ್ನು ಧಿಕ್ಕರಿಸಿ ದಿಗಂಬರಳಾಗಿ ಹೊರಬರುವ ಅಕ್ಕ ಬಂಡಾಯದ ಪ್ರತಿ ಮೂರ್ತಿಯೇ ಆಗಿರುವಳು. ವ್ಯಾಮೋಹದಿಂದ ನಿರ್ಮೋಹಗೊಂಡು 'ಹಸಿವಾದಡೆ ಭಿಕ್ಷಾನ್ನಗಳುಂಟು, ತೃಷೆಯಾದೆಡೆ ಕೆರೆ ಹಳ್ಳ ಬಾವಿಗಳುಂಟು ಶಯನಕ್ಕೆ ಹಾಳು ದೇಗುಲಗಳುಂಟು' ಎನ್ನುವಲ್ಲಿ ಮನುಷ್ಯನ ದುರಹಂಕಾರಕ್ಕೆ ವಿಮುಖಳಾಗಿ ನಿಸರ್ಗ ಮುಖಿಯಾದ ಚಲನೆಯನ್ನು ಕಾಣುತ್ತೇವೆ. ಇಲ್ಲಿ ಹಸಿವಾದಡೆ ಭಿಕ್ಷಾನ್ನಗಳುಂಟು

ಎನ್ನುವಲ್ಲಿ ಅಂದು ಭಿಕ್ಷೆ ಮೌಲ್ಯಿಕವಾಗಿತ್ತು ಅಲ್ಲದೆ ಅದಕ್ಕೆ ಪೂರ್ವಕಾಲದ ಇತಿಹಾಸವಿದೆ. ಅಂದರೆ ಭಿಕ್ಷೆ ದಾನರೂಪದಲ್ಲಿತ್ತು, ಇಂದಿಗೂ ಕೆಲವು ಸಂಸ್ಕೃತಿಗಳಲ್ಲಿ ಮನೆಗೆ ಬಂದವರನ್ನು ಬರಿಗೈಯಿಂದ ಸುಮ್ಮನೆ ಕಳುಸುವುದಿಲ್ಲ. ಹೊಣೆಗೇಡಿಗಳ ಸೋಮಾರಿಗಳ ಮೈಗಳ್ಳರ ಸಾಧನವಾಗಿರುವ ಸಧ್ಯದ ಹೊತ್ತಿನಲ್ಲಿ ಅಕ್ಕಮಹಾದೇವಿಯ ಈ ವಚನ ಬಹು ಅರ್ಥಗಳನ್ನು ಹೊರಡಿಸುತ್ತದೆ. ಕಾಯಕ ದಾಸೋಹಕ್ಕೆ ಪ್ರಮುಖವಾದ ಸ್ಥಾನವಿದ್ದ ಸಂದರ್ಭದಲ್ಲಿ ಅಕ್ಕಮಹಾದೇವಿ ಬದುಕಿದಾಕೆ. ಮೇಲ್ನೋಟಕ್ಕೆ ವಚನದ ಸಾಲುಗಳು ಅಕ್ಕಮಹಾದೇವಿಯ ನಿಲುವನ್ನು ಸಂದೇಹಿಸಿದರೂ ದಾಸೋಹದ ಪರಿಕಲ್ಪನೆ ಭಿಕ್ಷೆಯನ್ನು ಗೌರವಯುತ ಕಾಯಕವನ್ನಾಗಿಸುತ್ತದೆ. ಅಕ್ಕಮಹಾದೇವಿ ನಿಸ್ಸಂಗ ಪರಿತ್ಯಾಗಿಯಾದರೂ ಅವಳಿಗೆ ಸಾಮಾಜಿಕ ಜವಾಬ್ದಾರಿ ಜೊತೆಗೆ ನೈತಿಕ ಬದ್ಧತೆಯೂ ಇರುವ ಕಾರಣ ಅವಳ ನಿಸರ್ಗಮುಖಿ ಚಲನೆಗೆ ವಿಶೇಷಾರ್ಥವಿದೆ.

ಇಂದು ಇಡೀ ಮನುಷ್ಯ ಬದುಕೆ ನಿಸರ್ಗ ವಿಮುಖಿಯಾಗುತ್ತಿದೆ. ಛಿದ್ರ ವ್ಯಕ್ತಿತ್ವದ ದೇಹದಾರಿಗಳನ್ನು ನಿರ್ಮಿಸುತ್ತಿರುವ ಆಧುನಿಕ ತಂತ್ರಜ್ಞಾನ ದೈಹಿಕ ಶ್ರಮಕ್ಕೆ ಹೋಗಲಿ ಬೌದ್ಧಿಕ ಪ್ರೌಢತೆಗೂ ಮಾನ್ಯತೆಯಿಲ್ಲದಂತೆ ಮಾಡುತ್ತಿದೆ. ಯಂತ್ರಗಳ ಮಧ್ಯ ಮನುಷ್ಯ ಸಂಪತ್ತು ಕಳೆದು ಹೋಗುತ್ತಿದೆ. ಸಿದ್ಧ ಬದುಕು ಅದಕ್ಕೆ ತಕ್ಕಂಥ ಸಿದ್ಧ ಆಹಾರ, ಉಡುಪು ವ್ಯಕ್ತಿತ್ವ ಎಲ್ಲವೂ ಮನುಷ್ಯನನ್ನು ನಿರ್ಭಾವುಕವಾಗಿಸುತ್ತಿದೆ ನಿರ್ವೀರ್ಯನನ್ನಾಗಿಸುತ್ತಿದೆ.

ಅಕ್ಕನ ವಚನ ಇಲ್ಲಿಯೇ ಪ್ರಧಾನವೆನಿಸುವುದು. ಮನುಷ್ಯ ಸ್ವಾರ್ಥತೆಯ, ಜೀವವಿರೋಧಿ ನೆಲೆಗಳನ್ನು ಅಹಂಕಾರದ ಪರಮಾವಧಿಯನ್ನು, ಪ್ರಭುತ್ವದ ಹಂಗನ್ನು ನೀಗುವ ಮೂಲಕ ಮನುಷ್ಯ ನಿರ್ಮಿತ ವ್ಯವಸ್ಥೆಯನ್ನು ಛಿದ್ರೀಕರಿಸುತ್ತಾಳೆ. ತನ್ನ ಬದುಕಿಗೆ ಬೇಕಾದ ಅವಶ್ಯಕತೆಗಳನ್ನು ಯಾರ ಹಂಗೂ ಇಲ್ಲದೆ ಪರಿಸರದೊಡಲಿನಿಂದ ತುಂಬಿಕೊಳ್ಳುತ್ತಾಳೆ. ಪರಿಸರದ ಕಾಳಜಿ ಜೊತೆಗೆ ಮನುಷ್ಯ ನಿಸರ್ಗದ ಕೂಸು ಎನ್ನುವ ವಿವೇಕವನ್ನು, ಹುಟ್ಟಿಸಿದ ದೇವರು ಹುಲ್ಲುಮೇಯಿಸಲಾರ ಎನ್ನುವ ದೃಢಬದುಕಿನ ಒತ್ತಾಸೆಗಳನ್ನು ಅಕ್ಕ ಮಂಡಿಸುತ್ತಾಳೆ.

*'ಪೊಡವಿಯನಾಳುವರು ದೊರೆಗಳೆಂದೆನೆ?*
*ಮೃಡನ ವೇಷವ ಧರಿಸಿದವರ ಕಡುಗಲಿಗಳೆಂಬೆನೆ?*
*ಅರಿವು ಆಚಾರವನರಿಯದವರ ಲಿಂಗೈಕ್ಯರೆಂಬೆನೆ?*
*ಎನ್ನೆನಯ್ಯ ಅಮುಗೇಶ್ವರಲಿಂಗವೆ'*

ಅಮುಗೆ ರಾಯಮ್ಮ 'ಪೊಡವಿಯನಾಳುವರು ದೊರೆಗಳೆಂಬೆನೆ? ಎಂದು ಪ್ರಶ್ನಿಸುವ ರೀತಿ ಅಸಾಧಾರಣವಾದದ್ದು. 'ಕರ್ಮೇಂದ್ರಿಯಂಗಳ ಜರಿದು ಕಡುಗಲಿಯಾದೆನು ವರ್ಮವನತಿಗಳೆದು

ನಿರ್ಮಳನಾದೆನು, ಅಣ್ಣ ಕೂಳಿಕ್ಕುವರ ಮನೆಯ ಕೂಸ್ನಿಯಾಗಿಪ್ಪವರ ಎನಗೆ ಸರಿ ಎಂಬೆನೆ ಅಮುಗೇಶ್ವರಾ" ಇಲ್ಲಿ ಅನ್ನ ಹಾಕಿದವರ ಕೂಸ್ನಿಯಾಗಿರುವುದು ಸ್ಥಾಪಿತ ಮೌಲ್ಯ. ಈ ಸ್ಥಾಪಿತ ಮೌಲ್ಯ ಕಡೆಗಣಿಸಿ ಸಮಾನತೆ ಮೆರೆದುದು ಗಮನಾರ್ಹ. ರಾಯಮ್ಮನ ವಚನ ಇಡೀ ಪ್ರಭುತ್ವ ವ್ಯವಸ್ಥೆಯನ್ನೇ ನಡುಗಿಸುವಂತಿದೆ. ಪ್ರಭುತ್ವದ ವಿರುದ್ಧ 'ಯಕಶ್ಚಿತ' ಹೆಣ್ಣು ತಿರುಗಿ ಬೀಳುವುದೆಂದರೆ? ಯಜಮಾನ ಸಂಸ್ಕೃತಿ ತನ್ನ ಕರಾಳಬಾಹುಗಳಿಂದ ಎಷ್ಟೊಂದು ಜನರ ಹಿಂಸಿಸಿರ ಬೇಡ. ಅಣ್ಣ-ಅಪ್ಪಾ ಎಂದು ಹಾಸ್ಯದಿಂದ ಬಾಳಲಾರೆನು ಎನ್ನುವಲ್ಲಿ ವಚನಕಾರ್ತಿಯ ಆತ್ಮಾಭಿಮಾನ ಗಮನಸೆಳೆಯುತ್ತದೆ. ಹೆಣ್ಣು ಸಬಲೆ ಎನ್ನುವ ಸಂದೇಶ ಇದರಲ್ಲಿದೆ. ನುಡಿಯ ಹಂಗಿನ್ನು ನಿಮಗೆ ಹಿಂಗದು, ನಡೆಯನೆಂತು ಪರರಿಗೆ ಹೇಳುವಿರಿ. ಒಡಲ ಹಂಗಿನ ಸುಳುಹು' ಎನ್ನುವಲ್ಲಿ ಪಾರಂಪರಿಕವಾದ ಯಜಮಾನ ಸಂಸ್ಕೃತಿಯನ್ನು ಖಂಡಿಸಿ ಪುರುಷರಿಗೂ ಅಸಾಧ್ಯವಾಗಿದ್ದ ಕಠೋರ ಸಾಧನೆಗೈದರು. ಲಿಂಗಾಧಾರಿತ ವ್ಯವಸ್ಥೆಯನ್ನು ಮೀರಿ ಸ್ತ್ರೀ ಭೌತಿಕವಾಗಿ, ಶಾರೀರಿಕವಾಗಿ ದುರ್ಬಲಳು ತನ್ನ ರಕ್ಷಣೆಗಾಗಿ ಸ್ತ್ರೀಯು ಪುರುಷನ ಸ್ವಾಮಿತ್ವವನ್ನು ಪಡೆಯಲೇಬೇಕೆಂಬ ದುಸ್ತರ ಸಂದರ್ಭದಲ್ಲೂ ಸ್ಥಾಪಿತ ಹಿತಾಸಕ್ತಿ ಮತ್ತು ಯಜಮಾನ ಸಂಸ್ಕೃತಿಯ ಹುಳುಕುಗಳನ್ನೆಲ್ಲ ವಚನಕಾರ್ತಿಯರು ಬಯಲಿಗೆಳೆದರು. ಯಜಮಾನ ಸಂಸ್ಕೃತಿಗೆ ಪ್ರತಿರೋಧ ವ್ಯಕ್ತಪಡಿಸಿದರು.

ಸಾಮಾಜಿಕ ಸಂಘರ್ಷ ಮತ್ತು ಚಲನೆಗಳಿಗೆ ಕಾರಣವಾಗಿರುವ ಆಗುತ್ತಿರುವ ಸಂಗತಿಗಳೆಂದರೆ ಬಡತನ, ಸ್ತ್ರೀ ನಿಕೃಷ್ಟ ಭಾವನೆ, ಅಸ್ಪೃಶ್ಯತೆ, ಜಾತಿ, ಮತೀಯ ದ್ವೇಷಗಳು ವಚನಕಾರರಲ್ಲಿಯೂ ಕಂಡು ಬಂದಿರುವುದಲ್ಲದೆ ಸ್ತ್ರೀಯರನ್ನು ನಿಕೃಷ್ಟತೆಯಿಂದ ಗಣಿಸಿದ ಸಂಗತಿಗಳು ಕೂಡಾ ಅಲ್ಲಲ್ಲಿ ಕಂಡು ಬರುತ್ತವೆ. ಕನ್ನಡ ಸಾಹಿತ್ಯದಲ್ಲಿಯೂ ಕೂಡಾ ಯಜಮಾನ ಸಂಸ್ಕೃತಿ ವಿರುದ್ಧ ವಿರೋಧಗಳು ಅಲ್ಲಲ್ಲಿ ಅಂತರ್ಗತವಾಗಿದ್ದು ಕಾಣುತ್ತದೆ. ಆದಿಕವಿ ಪಂಪನು ಕೂಡಾ ರಾಜವಿರೋಧಿ ನಿಲುವು ತಳೆದಿದ್ದು ಆತನ ಕೃತಿಯಿಂದಲೇ ಕಂಡುಬರುವುದು. ಕರ್ಣನಿಗೆ ಅಂಗರಾಜ ಪಟ್ಟಕಟ್ಟಿ ಸಾಮಾಜಿಕ ಮೇಲ್‌ಚಲನೆಯನ್ನು ಅಲ್ಲಗೆಳೆದದ್ದು ಕಂಡು ಬರುವುದಲ್ಲದೆ ಅಲ್ಲಲ್ಲಿ ಕರ್ಣನನ್ನು ಮೆಚ್ಚಿಹೊಗಳಿದ್ದು ಗಮನಾರ್ಹ. ರನ್ನನಲ್ಲಿಯೂ ಅದೇ ವಿಚಾರ ಎದ್ದು ತೋರುವುದು. ಈ ಅಂತರ್ಗತ ಹೋರಾಟಕ್ಕೆ ಮುಖಾಮುಖಿಯಾಗುತ್ತಲೇ ಅಲಕ್ಷಿತ ವಚನಕಾರ್ತಿಯರು ಪವಿತ್ರೀಕರಿಸಲಾಗಿರುವ ಆಕೃತಿಗಳ ಪಾವಿತ್ರ್ಯನಾಶ ಮಾಡಿದರು. ಪ್ರಶ್ನಿಸಿದರು. ಆಕೃತಿಗಳ ನಾಶದ ಜೊತೆಗೆ ಕಟ್ಟುವ ಕ್ರಿಯೆಯೂ ಇದೆ. ಕೀಳೆನಿಸಿರುವ, ತಿರಸ್ಕೃತಗೊಂಡ ಆಕೃತಿಗಳ ಮೌಲ್ಯೀಕರಣವೂ ಆಗಿದೆ.

## ೫.೨. ಕೌಟುಂಬಿಕ ಪುರುಷಾಧಿಕಾರದ ವಿರುದ್ಧ

ವೈದಿಕ ಮೌಲ್ಯಗಳನ್ನು ಅಪವರ್ಗೀಕರಣಗೊಳಿಸುತ್ತ ಲಿಂಗ ಸಮಾನತೆಯನ್ನು ತರಲು ಕೆಳವರ್ಗದ ವಚನಕಾರ್ತಿಯರು ಪ್ರಯತ್ನಿಸಿದರು. ಮೇಲು ಸಂಸ್ಕೃತಿ ಸ್ವಾಭಾವಿಕವೆನ್ನುವಂತೆ ಹೇರುವ ಕಟ್ಟು ಪಾಡುಗಳನ್ನು ತಮ್ಮ ವಚನಗಳ ಮೂಲಕ ಕಿತ್ತೆಸೆದು ಮುಕ್ತ ಪರಿಸರವನ್ನು ನಿರ್ಮಿಸಲು ಪ್ರಯತ್ನಿಸಿದರು.

ಮಹಿಳೆಯರು ಸಂಪ್ರದಾಯ ಶರಣೆಯರು ಪರಮ ಆಸ್ತಿಕರು, ಗಂಡ, ಮನೆ, ಮಕ್ಕಳ ಪರಧಿಯಾಚೆ ನೋಡಲು ಒಪ್ಪರು. ಸಮಾಜದ ಅನಿಷ್ಟಗಳಾದ ಜಾತಿ ಪದ್ಧತಿ, ಅಸ್ಪೃಶ್ಯತೆ, ಮೂಢನಂಬಿಕೆಗಳ ಅಮಾನುಷ ಆಚರಣೆ ಇತ್ಯಾದಿಗಳ ಕುರಿತು ದಿವ್ಯ ನಿರ್ಲಿಪ್ತತೆ ರೂಢಿಸಿಕೊಂಡವರು ಎಂಬ ರೂಢಿಗಳ ನಂಬಿಕೆಯನ್ನು ಜಾಡಿಸುವಂತೆ ಅಲಕ್ಷಿತ ಮಹಿಳೆಯರು ತಮ್ಮ ಆಲೋಚನೆ ಮತ್ತು ಅಭಿವ್ಯಕ್ತಿ ಕ್ರಮಗಳನ್ನು ಕಟ್ಟಿಕೊಂಡರು.

ಹೆಣ್ಣು ಎಲ್ಲಾ ಕೆಡುಕಿನ ಮೂಲ-(ಮಹಾಭಾರತ) ಹೆಣ್ಣು ಪಾಪಿ ಗುಲಾಮಳು.(ಭಗವದ್ಗೀತೆ) ಸಧ್ಯ ನಾನು ಹೆಣ್ಣಾಗಿ ಹುಟ್ಟಲಿಲ್ಲ(ಪ್ಲೇಟೊ) ಹೆಣ್ಣು ಅಪರಿಪೂರ್ಣ(ಅರಿಸ್ಟಾಟಲ್), ಎಲ್ಲಾ ಪ್ರಾರ್ಥನೆಗಳು ಗಂಡು ಮಗುವಿಗಾಗಿ (ಋಗ್ವೇದ)[೧೦], ಈ ರೀತಿ ಶತಶತಮಾನಗಳಿಂದಲೂ ಸ್ತ್ರೀ ನಿಕೃಷ್ಟಳಾಗಿಯೇ ನಿರ್ವಚಿತಳಾಗಿದ್ದಾಳೆ. ಆದರೂ ಅಲಲ್ಲಿ ಮಹಿಳೆಯರು ವ್ಯವಸ್ಥೆಗೋ ಮುಖಿತೆಯನ್ನು ಪುರುಷಾಧಿಕಾರವನ್ನು ವಿರೋಧಿಸುತ್ತಲೇ ಬಂದಿದ್ದಾರೆ. ಪ್ರಾಚೀನ ಕಾಲದಲ್ಲಿ ಹೆಣ್ಣು ಧಾರ್ಮಿಕ ಕ್ರಿಯೆಗಳಲ್ಲಿ ಗಂಡಿಗೆ ಹೆಗಲೆಣೆಯಾಗಿಯೇ ಇದ್ದಳೆಂಬುದಕ್ಕೆ ಚರಿತ್ರೆಯಲ್ಲಿ ಉಲ್ಲೇಖಗಳಿವೆ. ಇಂದ್ರಾಣಿ, ಲೋಪಮುದ್ರಾ ಮುಂತಾದ ಸ್ತ್ರೀಯರು ರಚಿಸಿದ ಕೆಲವು ಮಂತ್ರಗಳು ಋಗ್ವೇದದಲ್ಲೇ ಸಿಗುತ್ತವೆ. ಕಾಲಕ್ರಮೇಣ ಅವಳಿಂದ ವಿದ್ಯಾಭ್ಯಾಸದ ಹಕ್ಕನ್ನು ಕಸಿದುಕೊಂಡು ಶೂದ್ರನ ಸ್ಥಾನದಲ್ಲಿ ನಿಲ್ಲಿಸಲಾಯಿತು. ಆ ಮೂಲಕ ಸ್ತ್ರೀಯನ್ನು ಅನರ್ಹಳನ್ನಾಗಿ ಮಾಡಲಾಯಿತು. ಮನುಹೆಣ್ಣು ಅಶುಭಳು ಅವಳಿಗೆ ಸತಿಸೇವೆಯ ಮೂಲಕವೇ ಸ್ವರ್ಗಸಿಗುತ್ತದೆ ಎಂದಿದ್ದಾನೆ. ಶತ ಶತಮಾನಗಳಿಂದಲೂ ರೂಪಗೊಳ್ಳುತ್ತಾ ಬಂದ ಇಂಥ ಕೀಳೀಕರಣ ಪುವೃತ್ತಿಯನ್ನು ಹನ್ನೆರಡನೆ ಶತಮಾನದ ವಚನಕಾರ್ತಿಯರು ಪ್ರತಿರೋಧಿಸಿದ್ದಲ್ಲದೆ ಸ್ವಾವಲಂಬಿಗಳಾಗಿ ಸ್ವಂತ ನಿರ್ಣಯ ಮಾಡುವ ಹೊಸ ಜೀವನ ಕ್ರಮಕ್ಕೆ ಹಂಬಲಿಸಿದ್ದು ಸಾಮಾನ್ಯವೇನಲ್ಲ.

ಮಧ್ಯಕಾಲೀನ ಕವಿಗಳಾದ ರಾಘವಾಂಕ ಕುಮಾರವ್ಯಾಸ, ಹರಿಹರ, ಚಾಮರಸ, ಲಕ್ಷ್ಮೀಶ, ಮುದ್ದಣ ಮನೋರಮೆ ಮುಂತಾದವರು ಕೃತಿಗಳಲ್ಲಿ ಪುರುಷಾಧಿಕಾರವನ್ನು ಪ್ರತಿಭಟಿಸಿದ ಅಂಶಗಳೇನಿಲ್ಲ. ಆದರೆ ಕುಮಾರವ್ಯಾಸನ ಕೃತಿಯಲ್ಲಿನ ದ್ರೌಪದಿ ಪ್ರತಿಭಟನೆ ಸ್ತ್ರೀ ಸ್ವಾತಂತ್ರ್ಯದ ದೃಷ್ಟಿಯಿಂದ ಬಹುಮುಖ್ಯವಾದದ್ದು. ಪಾಪಿಗಳಾ ಹೆಂಡತಿ ಕೊಂದಿರಿ ನೀವು ಐದು ಜನ ಒಬ್ಬ ಹೆಂಡತಿ ಆಳಲು ಆಗಲಿಲ್ಲ ನೀವು ಗಂಡರೋ ಷಂಡರೋ' ಎಂದು ಪ್ರಶ್ನೆಸಿದ್ದು ಆಕೆಯ ಬಂಡಾಯ ಮನೋಧರ್ಮವನ್ನು ಎತ್ತಿ ತೋರಿಸುತ್ತದೆ. ಇಲ್ಲಿ ದ್ರೌಪದಿಯ ಮೂಲಕ ಪುರುಷಾಧಿಕಾರವನ್ನು ಕುಮಾರವ್ಯಾಸ ಪ್ರಶ್ನಿಸಿದ್ದು ಗಮನಾರ್ಹ.

ಮಾನವ ಜಾತಿಯ ಇತಿಹಾಸದಲ್ಲಿ ಸ್ತ್ರೀಯರ ಮೇಲೆ ಆಗುತ್ತಿರುವ ಅನ್ಯಾಯ ಅತ್ಯಂತ ಸನಾತನವಾದುದು. ಪುರುಷರು ತಮ್ಮ ಸ್ವಾರ್ಥಕ್ಕಾಗಿ ಸ್ತ್ರೀಯರನ್ನು ವ್ಯವಸ್ಥಿತವಾಗಿ ನಿಯಂತ್ರಿಸಿಕೊಂಡು ಬಂದ ಬಗೆಯಿಂದಾಗಿ ಈ ಬದುಕೆ ಸ್ತ್ರೀಯರಿಗೆ ಸಹಜವಾದುದು ಎಂದು ಭಾವಿಸುವಂತಾಯಿತು. ರೂಸೋ-ಹೇಳಿರುವಂತೆ ಪುರುಷರು ಸ್ತ್ರೀಯ ಮೇಲೆ ಅಧಿಕಾರ ಹೊಂದಿರುವರು. ಪುರುಷನ ಕಾಮೇಚ್ಛೆಯನ್ನು ಜಾಗ್ರತಗೊಳಿಸುವುದು ಮತ್ತು ಅವರೊಂದಿಗೆ ಕಾಮಪಿಪಾಸು ಪ್ರವೃತ್ತಿಯನ್ನು ನಿರ್ಬಂಧಿಸುವುದು ಇವು ಸ್ತ್ರೀಯ ಕೆಲಸ. ಪುರುಷರನ್ನು ಆಕರ್ಷಿಸುವುದು, ಸಂತಸಪಡಿಸುವುದು ಅನ್ಯಾಯವನ್ನು ಸಹಿಸಿಯೂ ನಮ್ರಳಾಗಿರುವುದು ಶೂನ್ಯಳಾಗಿರುವಂತಹ ಕಲಕೌಶಲ್ಯವೂ ಅವಳ ಗುಣಧರ್ಮಗಳಾಗಿವೆ. ಅವಳ ತೋಲುಪತೆಯಂಥ ಪ್ರವೃತ್ತಿಗಳನ್ನು ನಿಯಂತ್ರಿಸುವುದು ಪುರುಷರ ಕಾರ್ಯವೆಂದಿದ್ದಾರೆ. ಈ ರೀತಿಯಲ್ಲಿ ಸ್ತ್ರೀಯನ್ನು ಪುರುಷರು ತಮಗೆ ಬೇಕಾದ ಹಾಗೆ ಬಳಸಿಕೊಂಡು ತಮ್ಮ ಅಧಿಕಾರ ಮೆರೆಯುವಂತ ಸಂದರ್ಭದಲ್ಲಿ ವಚನಕಾರ್ತಿಯರು ಕಾಣಿಸಿಕೊಂಡು ಪುರುಷಾಧಿಕಾರದ ವಿರುದ್ಧ ಪ್ರತಿಭಟಿಸಿದ್ದು ಮುಖ್ಯವಾದ ಅಂಶ.

ಅಕ್ಕಮಹಾದೇವಿ ಲೌಕಿಕದಿಂದ ಅಲೌಕಿಕದತ್ತ ಒಲಿಯಲು ಕೌಟುಂಬಿಕ ಕಾರಣವೇ ಮುಖ್ಯವಾದದ್ದು. ಅವಳ ಇಚ್ಛೆಯ ವಿರುದ್ಧದ ಮದುವೆ, ತಂದೆ-ತಾಯಿಗಳ ಒತ್ತಾಯ, ಪ್ರಭುತ್ವದ ಅಹಂಕಾರ ಅವಳ ಸ್ವಾತಂತ್ರ್ಯ ಹರಣ ಮಾಡಿದವು. ಕಾಮಾಂಧನಾದ ಕೌಶಿಕ ಅವಳ ಸಾತ್ವಿಕ ಭಕ್ತಿ ಬದುಕಿನ ಮೇಲೆ ಮಾಡಿದ ಪ್ರಹಾರ ಅವಳನ್ನು ವಿರಕ್ತಳನ್ನಾಗಿ ಮಾರ್ಪಡಿಸಿತು. ವೈಯಕ್ತಿಕವೆನಿಸಿದ ಅಕ್ಕನ ಈ ಅನುಭವವು ಭಾರತದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚರಿತ್ರೆಯಲ್ಲಿ ಕಾಣುವ ಗಂಡು ಹೆಣ್ಣಿನ ಮೇಲೆ ಮಾಡುತ್ತಾ ಬಂದಿರುವ ದಬ್ಬಾಳಿಕೆಯನ್ನು ಗ್ರಹಿಕೆಗೆ ತರುತ್ತದೆ.

*'ಎಲ್ಲರ ಗಂಡರು ಪರದಳ ವಿಭಾಡರು*
*ಎನ್ನ ಗಂಡ ಮನದಾಳ ವಿಭಾಡ*
*ಎಲ್ಲರ ಗಂಡಂದಿರು ಗಜವೇರಿಬೇಕಾರರು*
*ಎನ್ನ ಗಂಡ ಮನ ವೆಂಟೇಕಾರ*
*ಎಲ್ಲರ ಗಂಡರು ತಂದಿಕ್ಕಿಸಿಕೊಂಬರು*
*ಎನ್ನಗಂಡ ತಾರದೆ ಇಕ್ಕಿಸಿಕೊಂಬರು*
*ಎಲ್ಲರ ಗಂಡಂದಿರಿಗೆ ಮೂರು*
*ಎನ್ನಗಂಡಗೆ ಅದೊಂದೆ, ಅದೊಂದೆ ಸಂದೇಹ*
*ಕದಿರೆರೆಮ್ಮೆಯೊಡೆಯ ಗುಮ್ಮೇಶ್ವರಾ.*[೧೨]

ಎಲ್ಲರ ಗಂಡಂದಿರಿಗೆ ಮೂರು ಎನ್ನ ಗಂಡಂಗೆ ಅದೊಂದೆ ಅದೊಂದೆ ಸಂದೇಹ, ಇಲ್ಲಿ 'ಅದು' ಪದದ ಲೈಂಗಿಕಾರ್ಥ ಎಂಥವರಿಗೂ ಸ್ಪಷ್ಟ. ತನ್ನ ಮನೋವಲ್ಲಭ ಲಿಂಗ ಶರೀರಿಯಲ್ಲ ಎನ್ನುವ ಅರ್ಥವಿದೆ.[೧೩]' ಆಧ್ಯಾತ್ಮಿಕ ನೆಲೆಯಿಂದ ದೂರ ಸರಿದು ಕೌಟುಂಬಿಕ ನೆಲೆಯಲ್ಲಿ ಈ ವಚನ ಓದಿದರೆ ಹೆಣ್ಣು ಗಂಡಿನ ಪೌರುಷವನ್ನು ನಿರಾಕರಿಸಿದ್ದು ಕಂಡುಬರುವುದು. ಎಳೆಯಂದಿನಲ್ಲಿ ತಂದೆ-ತಾಯಿಂದಿರ, ಯೌವನದಲ್ಲಿ ಕೈಹಿಡಿದ ಗಂಡನ, ಮುಪ್ಪಿನಲ್ಲಿ ಮಕ್ಕಳ ರಕ್ಷಣೆಯಲ್ಲಿ ಇರಬೇಕಾದ ಹೆಣ್ಣು ಸ್ವಾತಂತ್ರ್ಯಕ್ಕೆ ಅನರ್ಹಳು ಎಂಬ ಮನುವಿನ ಧರ್ಮಸೂತ್ರವು ನಿಯಂತ್ರಿಸಿದ ಸಾಂಸಾರಿಕ ಚೌಕಟ್ಟನ್ನು ದಾಟಿ ವಚನಕಾರ್ತಿಯರು ವೈಚಾರಿಕತೆಯನ್ನು ಮೆರೆದುದು ಎದ್ದು ತೋರುವುದು.

*'ಅಂಬು ಇಲ್ಲದಿದ್ದರೆ ಅಂಬುಜವನಾರು ಬಲ್ಲರು*
*ನೀರಿಲ್ಲದಿದ್ದರೆ ಹಾಲನಾರು ಬಲ್ಲರು?*
*ನಾನಿಲ್ಲದಿದ್ದಡೆ ನಿನ್ನನಾರು ಬಲ್ಲರು?*
*ನಿನಗೆ ನನಗೆ ಬೇರೊಂದೆಡೆಯುಂಟೆ'*

ಇಲ್ಲಿ ನಾನಿಲ್ಲದಿದ್ದಡೆ ನಿನ್ನನಾರು ಬಲ್ಲರು? ಎಂಬ ಮಾತು ಕೌಟುಂಬಿಕ ಪುರುಷಾಧಿಕಾರವನ್ನು ಪ್ರತಿಭಟಿಸಿ ಆತ್ಮಸ್ಥೈರ್ಯ ಮೆರೆದ ವಾಕ್ಯವೇ ಸರಿ. ಎನಗೆ ನಿನಗೆ ಬೇರೊಂದೆಡೆಯುಂಟೆ ಎನ್ನುವಲ್ಲಿ ಸಮಾನತೆ ಮೆರೆದುದು ಮುಖ್ಯ. ವಚನ ಚಳುವಳಿಯ ಮಾಲ್ಯಿಕತೆಯಿಂದಾಗಿ ಒಬ್ಬ ಸಾಮಾನ್ಯ ಮಹಿಳೆಯಿಂದ ಇಂತಹ ಮಾತು ಬರಲು ಸಾಧ್ಯವಾಯಿತು. 'ಹೆಣ್ಣು ಬಿಟ್ಟು ಲಿಂಗವನೊಲಿಸಬೇಕೆಂಬರು, ಹೆಣ್ಣಿಂಗೂ ಲಿಂಗಕ್ಕೂ ವಿರುದ್ಧವೆ?'[೧೪] ಎಂದು ಪ್ರಶ್ನಿಸುವ ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀಯ ಈ ವಚನ ಸ್ತ್ರೀ ಪುರುಷನ ನಡುವಿನ ವಿಚಾರ ಭಿನ್ನತೆ ಮತ್ತು ಆಚಾರ ಭಿನ್ನತೆಗಳನ್ನು ಎತ್ತಿ ತೋರುವದಲ್ಲದೆ ಪುರುಷಾಧಿಕಾರವನ್ನು ಪ್ರಶ್ನಿಸಿ ಸಮಾನತೆಯ ಆಶಯವನ್ನು ವ್ಯಕ್ತಪಡಿಸುತ್ತದೆ. 'ಪುರುಷ ದೈವವೆಂದು ಅರಿತು ಆತನ ಗುಣವನೋಡದೆ ತನ್ನ ಗುಣವ ಬಿಡದೆ ಇದ್ದಡೆ ಪತಿವ್ರತೆ ಎನಿಸುವಳು ಮೇಲೆ ಮುಕ್ತಿಯಪ್ಪುದು' ಎಂದಿರುವ ಚೆನ್ನಬಸವಣ್ಣನವರ ಈ ವಚನ ಪುರುಷರೇ

ಸರ್ವಶ್ರೇಷ್ಠ, ಸ್ತ್ರೀ ಪುರುಷನ ಯಾವ ತಪ್ಪುಗಳಿಗೂ ಪ್ರತಿರೋಧಿಸದೆ ತಾನು ಮಾತ್ರ ಸನ್ಮಾರ್ಗದಲ್ಲಿ ನಡೆಯಬೇಕು. ಅಂತಹ ಸತಿಗೆ ಮಾತ್ರ ಮುಕ್ತಿ. ಇಲ್ಲಿ ಹೆಣ್ಣು-ಗಂಡು ಬೇರೆಯೇ ಎಂದು ಅರ್ಥಧ್ವನಿಸುವುದು. ಇವರ ಈ ಗುಣಗಳನ್ನು ಎಲ್ಲಿ ನಿಂತುನೋಡುವುದು? ಇದೆ ಕಾಲಮಿತಿಯಲ್ಲಿ ಬರುವ ಇನ್ನೊಬ್ಬ ವಚನಕಾರನೆಂದರೆ ಢಕ್ಕೆಯ ಬೊಮ್ಮಯ್ಯ.

*'ಲೋಕದ ರೂಢಿಯಲ್ಲಿ ಸತಿಯ*
*ಗುಣವನ್ನು ಪತಿಪರೀಕ್ಷಿಸಬೇಕು ಎನ್ನುತ್ತಾರೆ*
*ಆದರೆ ಪತಿಯ ಗುಣವನ್ನು ಸತಿ ಅಲಕ್ಷಿಸಬಹುದೆ?*
*ಇಲ್ಲವೆ ಉದಾಸೀನವಾಗಿರುವುದೇ?*
*ಅವರಿಬ್ಬರೂ ಒಂದಂಗದ ಎರುಡು ಕಣ್ಣಿದ್ದಹಾಗೆ*
*ಪತಿಯಿಂದ ಬಂದ ಸೋಂಕು ಸತಿಗೆ ಕೇಡು*
*ಸತಿಯಿಂದ ಬಂದ ಸೋಂಕು ಪತಿಗೆ ಕೇಡು ಸಹಜವ್'*[೧೫]

ಎನ್ನುವಲ್ಲಿ ಪತಿ-ಸತಿ ಬೇರೆಯಲ್ಲ, ಇಲ್ಲಿ ಮುಖ್ಯ ಅಮುಖ್ಯದ ಪ್ರಶ್ನೆಯೇ ಇಲ್ಲ. ಇಬ್ಬರು ಸಮಾನರು ಎಂಬಂಶವನ್ನು ಎತ್ತಿ ಹಿಡಿದು ವ್ಯವಸ್ಥೆಯ ಸನಾತನ ಅಸಮಾನ ನೆಲೆಗಳಿಗೆ ಚಿಕಿತ್ಸೆ ನೀಡುತ್ತಾರೆ.

ಪರಂಪರೆಯಲ್ಲಿ ಹೆಣ್ಣಿನ ಅಸ್ತಿತ್ವವನ್ನು ಆಕೆಯ ಪಾವಿತ್ರ್ಯ ಅಥವಾ ಶೀಲದ ಆಧಾರದ ಮೇಲೆ ನಿರ್ಧರಿಸುತ್ತ ಬರಲಾಗಿದೆ. ಒಂದೊಂದು 'ವಚನಕಾರರು ಸಹ ಪುರುಷವಾದಿಗಳಂತೆ ಕಾಣುತ್ತಾರೆ. 'ಸೂಳೆ' ಎಂಬುದು ಅವರಿಗೆ ಚಾಂಚಲ್ಯದ ದ್ರೋಹದ ದ್ವಂದ್ವದ ಕಟುಪತ್ರಿಮೆ. ಒಬ್ಬ ಗಂಡಿನ ನಿಷ್ಠೆಯ ಚೌಕಟ್ಟಿನಾಚೆಯಿರುವ ಹೆಣ್ಣನ್ನು ವಿವಾಹೇತರ ಸಂಬಂಧಗಳಲ್ಲಿ, ಹೆಣ್ಣನ್ನು ಅತ್ಯಂತ ಕೆಳಕ್ಕೆ ಬಿದ್ದವಸ್ತುವಾಗಿ ನೋಡುವ ನೈತಿಕ ದೃಷ್ಟಿಯಿದು.'[೧೬] 'ಎಲ್ಲರ ಗಂಡಂದಿರು ಮೇಲೆ ಎನ್ನಗಂಡ ಕೆಳಗೆ ನಾ ಮೇಲೆ' ಎನ್ನುವ ವಚನ ಹೊಸ ವಿಚಾರಗಳನ್ನು ಗ್ರಹಿಕೆಗೆ ತರುವುದು. ಹೆಣ್ಣು ಸಾಮಾನ್ಯವಾಗಿ ಕೌಟುಂಬಿಕ ಜೀವನದಲ್ಲಿ ಗಂಡಿಗೆ ಅಧೀನವಾಗಿರುವುದು ಎಲ್ಲಾ ಬಗೆಯ ನಿರ್ಬಂಧಗಳು ಹೆಣ್ಣಿಗೆ ಮಾತ್ರ ಮೀಸಲಿರಿಸಿದ್ದು, ಆಕೆ ತನ್ನೆಲ್ಲ ಭೌತಿಕ ಹಾಗೂ ಮಾನಸಿಕ ಚಟುವಟಿಕೆಗಳನ್ನು ಗಂಡಿಗಾಗಿಯೇ ಮಾಡುವುದು ಇಂಥ ವಿಷಮ ಕೌಟುಂಬಿಕ ಸಂಗತಿಗಳನ್ನು ತೀವ್ರವಾಗಿ ಆಕ್ಷೇಪಿಸಿದ್ದು ಗಮನಾರ್ಹ. ಹೀಗೆ ಕೌಟುಂಬಿಕ ಪುರುಷಾಧಿಕಾರವನ್ನು ಧಿಕ್ಕರಿಸುತ್ತಲೇ ಸ್ವಾತಂತ್ರ್ಯ, ಸ್ವಾವಲಂಬನೆ, ಆತ್ಮಗೌರವಗಳಿಂದ ವಂಚಿತವಾದ ಹೆಣ್ಣು ತನ್ನ ಸ್ಥಾನಮಾನ ಆತ್ಮಸ್ಥೈರ್ಯದ ಕೌಟುಂಬಿಕ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದ್ದಾಳೆ. ಒಮ್ಮತವ ಮೀರಿ ಇಮ್ಮನವ ತಂದಿರಿ ಇದು ನಿಮ್ಮ ಮನವೊ' ಎನ್ನುವ ಲಕ್ಕಮ್ಮನ ವಚನದಲ್ಲಿ ಗಂಡು ಹೆಣ್ಣಿನ ಸ್ಥಾನಮಾನಗಳು ಪಲ್ಲಟಗೊಂಡಿದೆ. ರೂಢಿಗತವಾಗಿ ಪುರುಷನ ಅಧೀನ ಸ್ಥಿತಿಯಲ್ಲಿರುವ

ಹೆಣ್ಣು ಲಕ್ಕಮ್ಮಳಲ್ಲ. ಲಿಂಗ ಸಂಬಂಧಗಳು ಬದಲಾವಣೆಗೊಂಡು ಹೆಂಡತಿಯ ಗಂಡನಿಗೆ ಮಾರ್ಗದರ್ಶಿಯಾಗುತ್ತಾಳೆ.

*'ಬಟ್ಟೆಹ ಮೊಲೆಯ ಭರದ ಜವ್ವನವ ಚೆಲುವ*
*ಕಂಡು ಬಂದಿರಣ್ಣಾ*
*ಅಣ್ಣಾ ನಾನು ಹೆಂಗೂಸಲ್ಲ'*[೧೭]

ಇಲ್ಲಿ ಸಮಾಜವು ಹೆಣ್ಣನ್ನು ಕಾಣುವ ರೀತಿ ವ್ಯಕ್ತವಾಗುವುದು. ಅಲ್ಲದೆ ಗಂಡಿನ ಕಾಮಪ್ರಣೀತ ಪ್ರಚೋಧನೆಯನ್ನು, ದಮನಕಾರಿ ಶಕ್ತಿಯನ್ನು ಪ್ರತಿಭಟಿಸಿದ್ದು ಗೋಚರವಾಗುವುದು. ಹೆಣ್ತನದ ಎಲ್ಲ ಬಾಹ್ಯ ನೆಲೆಗಳನ್ನು ನಿರಾಕರಿಸುವುದರಲ್ಲಿಯೇ ನಿಜವಾದ ಪರಿಯನ್ನು ಗುರುತಿಸಿಕೊಳ್ಳುತ್ತಾಳೆ. ಕಲುಷಿತಗೊಂಡ ಕೊಳಕು ಮನಸ್ಸುಗಳನ್ನು ಲೈಂಗಿಕ ಪರಿಭಾಷೆಯಲ್ಲಿ ವಿರೋಧಿಸಿರುವಳು. ಪುರುಷ ಜಗತ್ತು ಹೆಣ್ಣಿನಿಂದ ಅಪೇಕ್ಷಿಸುವ ಬಾಹ್ಯ ಸುಖ, ಹೆಣ್ಣನ್ನು ಕುರಿತಂತೆ ತಾನು ನಿರ್ಮಿಸಿಕೊಂಡ ಭಾವನೆಗಳನ್ನು ಇಲ್ಲಿ ಕಾಣಬಹುದು. 'ಲೌಕಿಕ ಪುರುಷರ ದೃಷ್ಟಿಯಲ್ಲಿ ಹೆಣ್ಣಿನ ಮನಸ್ಸು ಹೃದಯ ಬುದ್ಧಿಗಳಿಗಿಂತಲೂ ಅವಳ ದೈಹಿಕ ಆಶಯಗಳ ಮೇಲೆ ಮಾತ್ರ ಕೇಂದ್ರಿತವಾಗಿದೆ ಎಂಬ ದೃಢ ವಾಸ್ತವದ ದಾಖಲೆ'[೧೮] ಈ ವಚನದಲ್ಲಿ ಕಂಡು ಬರುವುದು. ಇಲ್ಲಿ ಲೌಕಿಕದ ವಿಕೃತಗಳನ್ನು ಹಳಿಯುತ್ತಲೇ ಅದೇ ಮಾರ್ಗದಲ್ಲಿ ನಡೆದು ಮುನ್ನುಗ್ಗಿ ಪಾರಮಾರ್ಥಿಕ ಹಾದಿ ಅನುಭವಿಸಿದುದು ಬಹುಮುಖ್ಯ.

ಇತ್ತೀಚಿನ ಸ್ತ್ರೀವಾದವು ಇದನ್ನೆ ವಿವರಿಸುವುದು. 'ಸ್ತ್ರೀವಾದ ಎಂದರೆ ಪುರುಷರಿಂದ ವಿಮೋಚನೆ ಪಡೆದು ತಮ್ಮದೇ ಆದ ಪ್ರತ್ಯೇಕ ಅಸ್ತಿತ್ವವನ್ನು ನಿರ್ಮಾಣ ಮಾಡಿಕೊಳ್ಳುವುದು ಎಂದಲ್ಲ, ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ, ಸಾವಿರಾರು ವರ್ಷಗಳಿಂದ ಸ್ತ್ರೀಯರಿಗೆ ಮಾನವತ್ವವನ್ನು ನಿರಾಕರಿಸಿ ಅವಳಿಗೆ ತಂದಿತ್ತಿರುವ ಪಶು ಅವಸ್ಥೆಯಿಂದ ಹೊರ ಬರುವುದು.'[೧೯] ಈ ವಿಚಾರಗಳು ಸುಮಾರು ಎಂಟುನೂರು ವರ್ಷಗಳ ಹಿಂದೆಯೆ ಪ್ರಾರಂಭಗೊಂಡರೂ ಇಂದು ಅದು ಸಂಘಟಿತ ನೆಲೆಯಲ್ಲಿ ರೂಪುಗೊಂಡು ವಿಶ್ವವ್ಯಾಪಿಯಾಗಿ ಬೆಳೆದಿದೆ ಎಂದು ಹೇಳಲಾಗದಿದ್ದರೂ ಅಸಂತೋಷದ ಕಿಡಿಯಂತೂ ಹತ್ತಿಕೊಂಡಿದೆ. ತಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯ, ಆತ್ಮಗೌರವ, ಸಾಮಾಜಿಕ ಸಮಾನತೆಯನ್ನು ಗಳಿಸಿ ಕೊಳ್ಳುವ ಹಿನ್ನೆಲೆಯಲ್ಲಿ ಈಗಾಗಲೇ ಸಾಕಷ್ಟು ಸಂಘಟಿತ ಹೋರಾಟಗಳು, ವಿಚಾರ ಮಂಥನಗಳು ನಡೆಯುತ್ತಿರುವುದು ಗಮನಾರ್ಹ.

## ೫.೩ ಪ್ರತಿಗಾಮಿ ಶಕ್ತಿಗಳು ವಿರುದ್ಧ

ವರ್ಣವ್ಯವಸ್ಥೆಯ ಶ್ರೇಣೀಕರಣವನ್ನು ಮುರಿದು ಸಮಾನ ವ್ಯಕ್ತಿತ್ವದ ಆಧಾರದ ಮೇಲೆ ಆಧ್ಯಾತ್ಮಿಕ ಮೌಲ್ಯಗಳ ನಿರ್ಮಾಣ ಕೈಗೊಂಡ ವಚನಕಾರರು ಸ್ತ್ರೀಗೆ ಧಾರ್ಮಿಕ ನೆಲೆಗಳಲ್ಲಿ ಸ್ವಂತ ಅಲೋಚನೆ ಅಭಿವ್ಯಕ್ತಿ ಮಾರ್ಗವನ್ನು ತೋರಿಸಿದರು. ಅದರಲ್ಲೂ ಕೀಳೀಕರಣಗೊಂಡ ವಚನಕಾರ್ತಿಯರ ವಚನಗಳಂತೂ ಸಿಡಿಮದ್ದಿನೋಪಾದಿಯಲ್ಲಿ ಸಿಡಿದಿವೆ. ಗುಡುಗಿನೋಪಾದಿಯಲ್ಲಿ ಗದ್ದರಿಸಿವೆ. ವರ್ಗಪರ ಐಡಿಯಾಲಜಿಗಳನ್ನು ಏಕಮುಖಿಯಾದ ದುಂಡು ಗ್ರಹಿಕೆಗಳನ್ನು ಎದುರಿಸುವಾಗ ತರ್ಕದ ಅವೇಶ ಸಹಜವಾಗಿ ಬರುವುದು. ಇಂಥ ಅವೇಶ ಅಂದಿನ ಸ್ತ್ರೀಯರಲ್ಲಿ ಕಾಣುವಂತಾಯಿತು.

ಹನ್ನೆರಡನೆಯ ಶತಮಾನವು ಭಕ್ತಿಯ ಚೌಕಟ್ಟಿನಲ್ಲಿ ವೈಚಾರಿಕತೆಯನ್ನು ಇರಿಸಿಕೊಂಡಿರುವುದರಿಂದ ಅದು ಪ್ರಗತಿ ಪರವೂ ಎನಿಸಿತು. ಈ ಚಳುವಳಿಯು ಎತ್ತಿದ ಪ್ರಶ್ನೆಗಳು ಸಾಮಾಜಿಕ, ಧಾರ್ಮಿಕ ಆರ್ಥಿಕ ನೆಲೆಗಳಲ್ಲಿ ಬದಲಾವಣೆ ತಂದವು. 'ಹಿಂದೂ ಧಾರ್ಮಿಕ ವ್ಯವಸ್ಥೆಯ ಜಡ ಸ್ವರೂಪವನ್ನು ರೂಢಿ ಅಚಾರಗಳನ್ನು ವಿರೋಧಿಸಿ ಧಾರ್ಮಿಕತೆಯನ್ನು ವೈಯಕ್ತಿಕ ಅನುಭವದ ಅರ್ಪಣಾತ್ಮಕ ನೆಲೆಯಿಂದ ಅರ್ಥೈಯಿಸಿದ್ದು ಭಕ್ತಿ ಚಳುವಳಿಯ ಬಹು ಮುಖ್ಯವಾದ ಸಾಧನೆಯಾಗಿದೆ. ಭಾರತದ ಧಾರ್ಮಿಕ ಚರಿತ್ರೆಯಲ್ಲಿ ಮನುಷ್ಯನ ಅನಾವರಣ ಕಾಲವೆಂದರೆ ಭಕ್ತಿಯ ಸಂದರ್ಭವೇ ಆಗಿದೆ ಎನ್ನಬಹುದು.[೧೯] ಧರ್ಮಾಧಾರಿತ ಸಮಾಜ ಸಂರಚನೆಯನ್ನು ಒಡೆದು ಕಟ್ಟುವ ಪ್ರಯತ್ನದಲ್ಲಿ ಈ ಚಳುವಳಿ ತೊಡಗಿತು. ಕಲ್ಲು ಮೊರದೈವಗಳ ದೈವದ ಕಲ್ಪನೆ ಈ ಅರ್ಥದಲ್ಲಿ ಸಾಮಾಜಿಕ ಸಮಾನತೆಯನ್ನು ಸಾಧ್ಯ ಮಾಡಿಕೊಡುವ ಒಂದು ರೂಪಕ. ಕೆಳವರ್ಗದವರಿಂದ ಬಂದುವರಿಂದಲೇ ಇಂತಹ ರೂಪಕ ಸೃಷ್ಟಿ ಸಾಧ್ಯವಾಯಿತು.

ಜ್ಞಾನ, ಜಾತಿ, ಧರ್ಮ ಇವು ಕೆಳವರ್ಗದವರ ಶೋಷಣೆಯ ಸಾಧನಗಳಾಗಿದ್ದವು. ಇವುಗಳನ್ನು ಒಡೆಯಲು ಶ್ರಮಿಸಿದರಲ್ಲದೆ ತಮ್ಮ ಸಾಮಾಜಿಕ ಅನುಭವದಿಂದಲೇ ಶರಣರು ಪಟ್ಟಭದ್ರ ವ್ಯವಸ್ಥೆಯನ್ನು ಟೀಕಿಸಿದರು. ಇಲ್ಲಿ ವಿರೋಧವೊಂದೆ ಪ್ರವೃತ್ತಿಯಾಗಿರಲಿಲ್ಲ, ಕಾರಣ 'ವಿರೋಧವೊಂದೆ ಪ್ರವೃತ್ತಿಯಾದಾಗ ಅದು ಅರಾಜಕವಾಗುತ್ತದೆ. ದ್ವೇಷವಾಗಿ ಬಿಡುತ್ತದೆ. ಪ್ರತಿಭಟನೆ ಎಂದರೆ ಇನ್ನೊಂದನ್ನು ಪ್ರೀತಿಸುವ ಮತ್ತು ಕಟ್ಟುವ ಸೃಜನಶೀಲವಾಗಿದ ಸಾಂಸ್ಕೃತಿಕ ಹೊಣೆಗಾರಿಕೆ ಕೂಡ[೨೦] ಈ ಹೊಣೆಗಾರಿಕೆ ಹೊತ್ತು ವಚನಕಾರ್ತಿಯರು ಬದುಕಿನ ಭ್ರಮೆಗಳನ್ನು ಸೀಳಿ ವಾಸ್ತವವನ್ನು ಕಂಡುಕೊಳ್ಳುತ್ತ ಪ್ರತಿಗಾಮಿ ಶಕ್ತಿಗಳ ವಿರುದ್ಧ ಸಮರಸಾರಿದರು.

ದಲಿತವರ್ಗದಿಂದ ಬಂದ ಕಾಳವ್ವೆಯ 'ಕುರಿಕೋಳಿ ಕಿರಿಮೀನು ತಿಂಬುವರೆಲ್ಲ ಕುಲಜ ಕುಲಜರೆಂಬರು ಅವರೆಂತು ಕುಲಜರು? ಎನ್ನುವ ಪ್ರಶ್ನೆಯಲ್ಲಿ ಅರ್ಥವಿದೆ. ಉತ್ತಮ ಎನಿಸಿಕೊಂಡ ಸಂಸ್ಕೃತಿಗಳ ಹೀನ ಪ್ರವೃತ್ತಿಗಳನ್ನು ಅವಳು ಪ್ರಶ್ನೆಮಾಡುತ್ತಾಳೆ. ಕೆಳವರ್ಗದವರ ಬದುಕಿನ ಪ್ರೀತಿ, ನಂಬಿಕೆ, ಆಚರಣೆಗಳು ಹೇಗೆ ಹೀನ ಎಂದು ಎಷ್ಟೋ ಜನ ಮಹಿಳಾ ವಚನಕಾರ್ತಿಯರು ಪ್ರಶ್ನಿಸಿದ್ದುಂಟು ಅಂತವರಲ್ಲಿ ಬಹುಮುಖ್ಯಳು ಈ ಕಾಳವ್ವೆ 'ಬೇರೆ ಬೇರೆ ಪ್ರಾಣಿಗಳನ್ನು ತಿನ್ನುವುದರಲ್ಲಿ ಇರುವ ಪಾತಕ ಪ್ರಮಾಣದ ಏರುಪೇರುಗಳನ್ನು ಕುರಿತು ಮನುದೊಡ್ಡಯಾದಿಯನ್ನೆ ಸಿದ್ದಪಡಿಸಿದ್ದಾನೆ. ಇವತ್ತೂ ಕೂಡಾ ಮಾಂಸಾಹಾರದಲ್ಲಿ ಅವರು ತಿನ್ನುವ ಪ್ರಾಣಿಯ ಆಧಾರದ ಮೇಲೆ ಶ್ರೇಣೀಕರಣಗಳಿವೆ. ೧. ಮಾಂಸಾಹಾರಿ ಪ್ರಾಣಿಗಳಿಗಿಂತ ಸಸ್ಯಾಹಾರಿ ಪ್ರಾಣಿಗಳನ್ನು ತಿನ್ನುವದು ಶ್ರೇಷ್ಠ. ೨. ಸತ್ತ ಪ್ರಾಣಿಗಿಂತ ಜೀವಂತ ಪ್ರಾಣಿಯನ್ನು ಕೊಂದು ತಿನ್ನುವುದು ಶ್ರೇಷ್ಠ ೩. ವಯಸ್ಸಾಗಿ ಕಾಯಿಲೆಯಿಂದ ಸತ್ತ ಪ್ರಾಣಿ ತಿನ್ನುವುದಕ್ಕಿಂತ ಆಕಸ್ಮಿಕವಾಗಿ ಸತ್ತ ಆರೋಗ್ಯಕರ ಪ್ರಾಯದ ಪ್ರಾಣಿಯನ್ನು ತಿನ್ನುವುದು ಶ್ರೇಷ್ಠ.[೨೦]

ಈ ವಾಖ್ಯದಲ್ಲೂ 'ಹೊಲಸು ತಿನ್ನುವವನೇ ಹೊಲೆಯ ಕೊಲ್ಲುವವನೇ ಮಾದಿಗ' ಎಂಬ ಧ್ವನಿಗೆ ವಿರೋಧವಿದೆ. 'ಇದು ಕೀಳಲ್ಲ ಕಾಣಿರಿ' ಎಂದು ತಿಳಿಹೇಳುವ ರಕ್ಷಣಾತ್ಮಕವಾದ ಇದು ಹೇಗೆ ಕೀಳಾಗುತ್ತದೆ ಎಂದು ಪ್ರಶ್ನಿಸುವ ದೃಢತೆ. ನಿವೆಂತು ಮೇಲು? ಎಂದು ಪ್ರಮಾಣೀಕರಣ ಮಾಡುವವರನ್ನು ತುಡುಕಿಕೊಳುವ ಆಕ್ರಮಣ ಶೀಲತೆ, ಈ ಮೂರು ವಿಧಾನಗಳಲ್ಲಿ 'ಕೀಳಿನ' ಮೌಲ್ಯೀಕರಣ ಮಾಡಿದರೆನಿಸುತ್ತದೆ.[೨೨] ಇಂತಹ ಇಕ್ಕಟ್ಟುಗಳಲ್ಲಿ ಒಮ್ಮೊಮ್ಮ ವಿಷಾದ ಹತಾಶೆಗಳು ಕಾಣಿಸಿಕೊಂಡರೂ ಅವುಗಳಲ್ಲಿನ ಪ್ರಚಂಡ ಮೊನಚು, ಧೈರ್ಯ ಗಮನಿಸುವಂಥದ್ದು.

ಗುರುಲಿಂಗ ಜಂಗಮರ ಹೆಸರಿನಲ್ಲಿ ಸಮಾಜ ವಿಮುಖಿ ಕೆಲಸ ಮಾಡುತ್ತಿದ್ದ ಆಚಾರ ಡಂಭಕರನ್ನು ವಚನಕಾರ್ತಿಯರು ಬಯಲಿಗೆಳೆದಿದ್ದಾರೆ.

*'ಕುಲಜವ ವೇಷವ ತೊಟ್ಟು ಹಂದಿಯಂತೆ*
*ತಿರುಗುವವರು ಉತ್ತರ ಪಥಕ್ಕೆ ಹೋಗಿ ಮುಕ್ತಿಯ*
*ನರಿಯಬೇಕೆಂಬರು ಜಂಗಮವಾದವೆಂಬರು ಜಗಭಂಡರಾದರು'*
*ಅದೇ ರೀತಿ 'ಎನ್ನಕರಣಂಗಳ ಲಿಂಗದಲ್ಲಿ ಕಟ್ಟುವೆ, ಗುರುಲಿಂಗ ಜಂಗಮರ*
*ಕಾಲ ಕಟ್ಟುವೆ ವ್ರತಭ್ರಷ್ಟರ ನಿಟ್ಟೊರೆಸುವೆ*
*ಸುಟ್ಟು ತುರತುರನೆ ತೂರುವೆ*
*ನಿರ್ಭೀತ ನಿಜಲಿಂಘದಲ್ಲಿ'*[೨೩]

ಎನ್ನುವ ಕಾಲಕಣ್ಣಿಯ ಕಾಮಮ್ಮನ ನಾಮಂಕಿತವೆ ಪ್ರತಿಗಾಮಿಗಳನ್ನು ವಿರೋಧಿಸಿದಂತಿದೆ. ಪ್ರತಿಗಾಮಿಗಳನ್ನು ಸುಟ್ಟು ತುರತುರನೆ ತೂರುವೆ, ಕಾಲಕಟ್ಟುವೆ, ನಿಟ್ಟೊರೆಸುವೆ ಎನ್ನುವಲ್ಲಿ ಆಕ್ರೋಶ

ವ್ಯಕ್ತವಾಗುವುದು. ನಾನೊಲ್ಲೆ ಬಲ್ಲೆನಾಗಿ ಕುಂಬೇಶ್ವರಾ ಎನ್ನುವ ಕೇವಲದೇವಿ, ಒಲ್ಲೆ ಬಲ್ಲನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ ಎನ್ನುವ ಕೊಟ್ಟಣ್ಯ ಸೋಮವ್ವ, ನೀ ಬೆರೆದಡೆ ಬೇರೆ ನಾನೊಲ್ಲೆ ಎನ್ನುವ ರೇಚವ್ವ ಇವರು ಪ್ರತಿಗಾಮಿ ಶಕ್ತಿಗಳನ್ನು ವಿರೋಧಿಸಿದ್ದು ಎದ್ದುತೋರುವುದಲ್ಲದೆ ದೇವರನ್ನು ಪ್ರಶ್ನಿಸಿ ನೀ ಬೆರೆದಡೆ ಬೆರೆ ನಾನೊಲ್ಲೆ ಎನ್ನುವ ನಿಷೇದಾತ್ಮಕ ನಿಲುವು ಬೋಧೆಯ ಹೇಳುವ ಅಣ್ಣಗಳಿರಾ ಕುರುಡ ಕನ್ನಡಿಯ ಹಿಡಿದಂತೆ' ಎನ್ನುವ ಮೂಲಕ ಲಿಂಗಮ್ಮ ಪ್ರತಿಗಾಮಿ ಪ್ರವೃತ್ತಿಗಳನ್ನು ಗೇಲಿ ಮಾಡುತ್ತಾಳೆ. ಇದರಿಂದಾಗಿ 'ವ್ಯಕ್ತಿನಿಷ್ಠ ಅತ್ಮೋನ್ನಡಿಯ ಸ್ವತಂತ್ರ ಮನೋಭಾವ ಅವರಲ್ಲಿ ಬೆಳೆಯಲು ಸಾಧ್ಯವಾಯಿತು. ಅಲ್ಲಿಯವರೆಗೆ ಸುತ್ತಿ ಬೆಳೆದ ಅನೇಕ ಪವರು ಕೀಳಿರಿಮೆಗಳು ಅವರ ಪ್ರಜ್ಞೆಯಲ್ಲಿ ಕಳಚುತ್ತ ಬರಲು ಕಾರಣವಾದವು'[೨೫]

ಆಧುನಿಕ ಮಾನವತಾವಾದ ಹಾಗೂ ವೈಚಾರಿಕತೆಗಳು ಮಾಡಬಹುದಾದ ಸಾಮಾಜಿಕ ಟೀಕೆಯನ್ನು ನಮ್ಮ ವಚನಕಾರ್ತಿಯರು ತಮ್ಮ ಸಾಮಾಜಿಕ ಅನುಭವದಿಂದಲೇ ತಲುಪಿದ್ದರು ಎನ್ನುವುದು ಇಲ್ಲಿ ಮುಖ್ಯವೆನಿಸುತ್ತದೆ. ವಚನಕಾರ್ತಿಯರ ಈ ಪ್ರಗತಿಗಾಮಿ ಧೋರಣೆ ಸ್ಥಾವರದತ್ತ ಎಳೆಸುವ ಪ್ರತಿಗಾಮಿ ಶಕ್ತಿಗಳ ವಿರುದ್ಧ ಸಾರಿದ ಬಹಿರಂಗ ಸಮರವೇ ಆಗಿತ್ತು. ಅದು ಕೆಳಸಮುದಾಯದ ಸ್ತ್ರೀಯರು ವ್ಯವಸ್ಥೆಯ ವಿರುದ್ಧ ಸಿಡಿದೇಳುವುದೆಂದರೆ ಸಣ್ಣ ಮಾತೇನಲ್ಲ, ಹೀಗಾಗಿಯೇ ವಚನಕಾರ್ತಿಯರು ಸಮಕಾಲೀನ ಸಂದರ್ಭದಲ್ಲಿ ನಮಗೆ ಬಹುಮುಖ್ಯವಾಗಿ ಕಾಣುತ್ತಾರೆ.

## ೫.೪ ವ್ಯಕ್ತಿ ಮತ್ತು ಆಂತರಿಕ ದ್ವಂದ್ವಗಳ ವಿರುದ್ಧ

ಹುಟ್ಟಿನಿಂದ ಶ್ರೇಷ್ಠರಾದ ಬ್ರಾಹ್ಮಣರ ಪಾವಿತ್ರ್ಯವನ್ನು ವಚನಕಾರರು ಅಲ್ಲಗೆಳೆಯುತ್ತ ಅದರಲ್ಲೂ ಮೇಲುಸ್ತರದ ವಚನಕಾರರು ತಮ್ಮನ್ನು ತಾವು ಕೀಳೀಕರಸಿಕೊಂಡು ಉನ್ನತ ಜಾತಿಯ ಅಹಂಮಿಕೆಯನ್ನು ತೊಡೆದು ಸಮಾನತಾ ತತ್ವವನ್ನು ತರುವಲ್ಲಿ ಪ್ರಯತ್ನಿಸಿದ್ದು ವಿಶೇಷವೇ ಸರಿ. ಈ ಚಳುವಳಿಯ ತುರ್ತು ತ್ರೀವ್ರತೆ, ತಹತಹಗಳು ಸರ್ವರಿಗೂ ಸಾಧ್ಯವಿಲ್ಲ. ಲಿಂಗ ಜಂಗಮ ಪಾದೋದಕ ಇತ್ಯಾದಿ ಪದಗಳು ಹೊಸಧರ್ಮದ ಹೆಸರಿನಲ್ಲಿ ಸಮಾಜವನ್ನು ವಿಕೃತಗೊಳಿಸುವ ಕ್ರಿಯೆಯಲ್ಲಿ ಉದ್ಯುಕ್ತಗೊಂಡ ವಿಷಯಲಂಪಟರನ್ನು ಡಂಭಾಚಾರಿಗಳನ್ನು ನಿರ್ಭೀಡೆಯಿಂದ ಖಂಡಿಸಿದ್ದು ಮುಖ್ಯವಾದರೂ ಹಲವು ಬಗೆಯ ದ್ವಂದ್ವತೆಗಳು ಎದ್ದು ತೋರುವವು.

ಶ್ರಮಿಕವರ್ಗ, ಶ್ರಮಿಕವಲ್ಲದ ವರ್ಗಗಳಲ್ಲಿ ಅನೇಕ ವೈರುಧ್ಯಗಳು ಕಾಣದೊರೆಯುತ್ತವೆ. ಉಪೇಕ್ಷಿತ ನೆಲೆಯಲ್ಲಿ ಕಂಡು ಬರುವ ವರ್ಗದಲ್ಲಿ ಅನ್ನವೇ ಮುಖ್ಯ. ಇವರಿಗೆ ಬೌದ್ಧಿಕವಾದದ್ದಕ್ಕಿಂತ,

ದೈಹಿಕದುಡಿಮೆಯೆ ಹೆಚ್ಚು ಮಹತ್ವದ್ದು, ದುಡಿಮೆಯ ಮೂಲಕ ಅನುಭಾವ ಕಾಣುವರು. ಗಂಡ ಹೆಂಡತಿಯರಲ್ಲಿಯೂ ಕೂಡಾ ಆಂತರಿಕ ದ್ವಂದ್ವತೆಗಳನ್ನು ಅವರ ವಚನಗಳ ಮೂಲಕ ಗುರುತಿಸಬಹುದಾಗಿದೆ. 'ಹೊಲೆ ಮಾದಿಗೆ ಭಕ್ತನಾದಡೆ ಕಂಡು ಗಣಂಗಳು ಹಿಗ್ಗುವರಲ್ಲದೆ ಅವರ ಮನೆಯಲ್ಲಿ ಲಿಂಗಾರ್ಚಣೆಯ ಮಾಡರು ಅದೇನು ಕಾರಣವೆಂದಡೆ... ಕಲಿದೇವ'

ಮಡಿವಾಳ ಮಾಚಯ್ಯನ ಈ ವಚನದಲ್ಲಿ ಮೇಲ್ವರ್ಗದ ಜನರು ನುಡಿದಂತೆ ನಡೆಯದಿದ್ದಾಗ ಅಂಥವರನ್ನು ಕಂಡು ಕ್ರೋಧಗೊಂಡು ವ್ಯವಸ್ಥೆಯ ದ್ವಂದ್ವತೆಯನ್ನು ಎತ್ತಿತೋರಿದ್ದು ಮುಖ್ಯ. 'ಬಸವಯ್ಯನಾಡಿದುದು ನಿಜವಲ್ಲ ಅತತಳವಲ್ಲದಮಾಗಿಯು, ಪ್ರಭುಗಳು ನುಡಿವರೆಂಬಲ್ಲಿ ಜ್ಞಾನದಿರವಲ್ಲದೆ ಕ್ರಿಯಾಪರವಲ್ಲ ಕಾಣಾ ಚೆನ್ನಬಸವಣ್ಣ' ಈ ವಚನ ಚಳುವಳಿಯ ನೇತಾರನ್ನೇ ವಿರೋಧಿಸಿದಂತೆ ಭಾಸವಾಗುವದು. ಕಾರಣ ಕೀಳೀಕರಣಗೊಂಡ ಜನಸಮುದಾಯಗಳಿಗೆ ಯಾವುದೇ ರೀತಿಯಲ್ಲಿ ಅನ್ಯಾಯವಾಗಿರಲಿಕ್ಕೆ ಸಾಕು. 'ಲಿಂಗವಿಲ್ಲದ ಗುರುವಾಗಬೇಕು ಲಿಂಗವಿಲ್ಲದ ಶಿಷ್ಯನಾಗಬೇಕು' ಎನ್ನುವ ಈ ವಚನ ವೀರಶೈವ ಭಕ್ತಿ ಅಂದೋಲನದ ಮೂಲವನ್ನೇ ಅನುಮಾನಿಸಿದಂತಿದೆ. ಅಲ್ಲದೆ ಲಿಂಗದೀಕ್ಷೆಯಂಥ ಆಚರಣೆಯನ್ನು ವಿರೋಧಿಸಿರುವಂತೆ ಕಂಡು ಬರುವುದು.

*'ತಾನು ಹೆಣ್ಣಲ್ಲ ಸಿರಿಯಿದ್ದ ವಸ್ತುವಿನ ವಧುವಾದ*
*ಕಾರಣ ತನಗೆ ಹೆಣ್ಣು ನಾಮವಿಲ್ಲ'*
*ಮಡದಿ ಎನಲಾಗದು ಎನಗೆ*[೨೫]

ಎನ್ನುವ ನೀಲಮ್ಮನು ತಾನು ಲೌಕಿಕ ರೀತಿಯ ಹೆಣ್ಣಲ್ಲ ಎಂಬುದನ್ನು ಸ್ಪಷ್ಟಪಡಿಸಿರುವಳು. ನೀಲಮ್ಮನಿಂದ ಈ ಮಾತುಗಳು ಪಡಿಮೂಡಬೇಕಾದರೆ ಅದರ ಹಿಂದಿನ ವೇದನೆ ಏನಿರಬಹುದು? ನಾನು ಹೆಣ್ಣಲ್ಲ ತನಗೆ ಹೆಣ್ಣು ನಾಮವಿಲ್ಲ, ಹೆಣ್ಣು ರೂಪಧರಿಸಿ ಆಡಲಿಲ್ಲ ಎಂದು ಹೆಣ್ಣಿನ ಮೇಲಾಗುವ ದೌರ್ಜನ್ಯಗಳೂ ಆಕೆಯ ಆಲೋಚನಗೆ ಬಂದಿರಲಿಕ್ಕೆ ಸಾಕು. ಆದರೆ ಕೊನೆಯಲ್ಲಿ ನಾನು ಸಿರಿಯಿದ್ದ ವಸ್ತುವಿನ ವಧುವಾದ ಕಾರಣ ಎಂಬಲ್ಲಿ ಒಂದೆಡೆ ತಾನು ಹೆಣ್ಣು ಜನ್ಮದಲ್ಲಿ ಹುಟ್ಟಿದ ಪಾಪಿ ಎಂದು ಕೊಂಡರೂ ತಾನು ಹೆಣ್ಣಲ್ಲ ಎಂದಿರುವ ಮಾತು ಗಮನಿಸುವಂಥದ್ದು. 'ಸಂಗಯ್ಯನಲ್ಲಿ ನಿಜವಿಡಿದ ಹೆಣ್ಣು ತಾನು ಎನ್ನುತ್ತಾಳೆ. ಕಾರಣ ತಮ್ಮದು ಅಲೌಕಿಕ ರೀತಿಯ ಸಂಸಾರವಲ್ಲ, ಊಟಕ್ಕಿದವರ ಕಂಡು ತೃಪ್ತಿಯಾದಂತೆ ಕೂಟವಿಲ್ಲದ ಪುರುಷನ ಕಂಡು ಕಾಮದ ಆತುರ ಹಿಂಗಿದೆ ಬಸವನ ಶ್ರೀಪದದಲ್ಲಿ ಆಕೆಯ ಬಾಳು ಉರಿಯುಂಡ ಕರ್ಪೂರವಾಗಿದೆ.[೨೬] ಇಲ್ಲಿ ಶರಣೆ ನೀಲಮ್ಮನಿಗೆ ಕೋಪ, ತಾಪ, ಮುನಿಸುಗಳು, ಬೇಸರ ಬರಡುತನ ಬರಲಿಲ್ಲವೆ? ಎಂದಲ್ಲ,

ಬಸವಣ್ಣನ ಅಗಲಿಕೆಯಿಂದ ಆಕೆ ಅನುಭವಿಸಿದ ನೋವು ಮುಖ್ಯವಾದುದು. 'ಎನಗೆ ಮಾರಯ್ಯ ಪ್ರೀಯ ಅಮರೇಶ್ವರ ಲಿಂಗ ಉಳ್ಳನ್ನಕ್ಕ ಯಾರ ಹಂಗಿಲ್ಲ ಮಾರಯ್ಯ' ಎನ್ನುವಲ್ಲಿ ಲಕ್ಕಮ್ಮ ಮಾರಯ್ಯ ಪ್ರೀಯ ಅಮರೇಶ್ವರ ಲಿಂಗವಿದ್ದರೆ ಮಾತ್ರ ಎನ್ನುವಲ್ಲಿ ಪತಿಯೇ ಪರದೈವ ಎಂಬ ನುಡಿ ಸೂಚಿತವಾಗುವುದು. ಹಾಗೆ ಪತಿಯ ಮೆಚ್ಚುಗೆಯ ದೇವನೇ ತನ್ನದೇವ ಎನ್ನುವುದು ಒಂದೆಡೆ. ಆಕೆಯ ಧೈರ್ಯಸ್ಥೈರ್ಯಗಳು ಎಚ್ಚರಗೊಂಡರೂ ಮತ್ತೊಂದೆಡೆ ಪುರುಷನಿಗೆ ಅಧೀನವಾದದ್ದು ಕಂಡುಬರುವುದು. ಇಲ್ಲಿ ಜೈವಿಕ ಸ್ವರೂಪದ ಲಿಂಗ ಭಿನ್ನತೆಗಿಂತಲೂ ರೂಪುಗೊಂಡು ಬೆಳೆದ ಮೌಲ್ಯಗ್ರಹಿಕೆಗಳೇ ಸ್ತ್ರೀ ವರ್ಗದ ದುರವಸ್ಥೆಯ ಮೌಲ್ಯೀಕರಣಗಳಾಗಿರುವುದು ಸ್ಪಷ್ಟ.

ಕನ್ನಡ ಸಾಹಿತ್ಯ ಚರಿತ್ರೆಯು ವ್ಯಕ್ತಿ ಮತ್ತು ಆಂತರಿಕ ದ್ವಂದ್ವಗಳನ್ನು ಮೇಳೈಯಿಸಿಕೊಂಡೆ ಬೆಳೆದದ್ದುಂಟು. 'ಪಂಪನು ಮಾನವ ಜಾತಿ ತಾನೊಂದೆ ವಲಂ' ಎಂಬ ತನ್ನ ಹೇಳಿಕೆಯಿಂದ ಪ್ರಸಿದ್ಧವಾದದ್ದೆನೋ ನಿಜ. ಆದರೆ ಅವನೇ ಹೇಳಿದ 'ಜಾತಿಯೊಳೆಲ್ಲ ಉತ್ತಮವಾದ ಜಾತಿ ವಿಪ್ರಕುಲಂ' ಎಂಬ ಹೇಳಿಕೆಯನ್ನೇನು ಮಾಡುವುದು? ಇಲ್ಲಿ ದ್ವಂದ್ವತೆ ಇದೆ. ವಚನಾಂದೋಲನದಲ್ಲಿಯೇ ಅನೇಕ ನಿದರ್ಶನಗಳು ದೊರೆಯುವುದುಂಟು. 'ಕೊಲ್ಲುವವನೇ ಮಾದಿಗೆ ಹೊಲಸು ತಿನ್ನುವನೇ ಹೊಲೆಯ' ಎಂದಿರುವ ಬಸವಣ್ಣ ಎಡದ ಕೈಯಲ್ಲಿ ಕತ್ತಿ ಬಲದಕೈಲಿ ಮಾಂಸ ಬಾಯಲ್ಲಿ ಸುರೆಗಡಿಗೆ ಇದ್ದರೂ ಅಂಥ ಕೆಲವರನ್ನು ಶಿವಭಕ್ತರೆಂದು ಒಪ್ಪಿಕೊಳ್ಳುತ್ತೆನೆಂದು ಹೇಳುವುದೇಕೆ?[೨]

ಲಕ್ಷೀಶನ ಜೈಮಿನಿ ಭಾರತದಲ್ಲಿಯೂ ಈ ರೀತಿಯ ದ್ವಂದ್ವತೆಗಳು ಕಂಡು ಬರುತ್ತವೆ. 'ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ, ಕಡುವಾತಕಂಗೈದು ಪೆಣ್ಣಾಗಿ ಸಂಭವಿಸಿದೊಡಲು ಪೊರೆವುದೆನ್ನೊಳ ಪರಾಧಮುಂಟು' ಎಂದು ಹೇಳುವ ಸೀತೆ ತಾನು ಹೆಣ್ಣಾಗಿ ಹುಟ್ಟಿದ್ದೆ ಪಾಪ ಕೃತ್ಯದ ಸಂಕೇತವೆಂದೂ ತನ್ನ ಹುಟ್ಟನ್ನು ಹಂಗಿಸುತ್ತಿದ್ದಾಳೆ. ತನ್ನದೇ ತಪ್ಪೆಂದು ಒಪ್ಪಿಕೊಳ್ಳುವ ಈಕೆಯಲ್ಲಿ ವ್ಯವಸ್ಥೆ ಅದಿಷ್ಟು ಒತ್ತಡ ಹೇರಿರಬಹುದು. ಆದರೆ ಅಂತರ್ಯದಲ್ಲಿರುವ ದ್ವಂದ್ವತೆಯನ್ನು ಮರೆಯುವಂತಿಲ್ಲ. 'ಏಕೆನ್ನ ಹುಟ್ಟಿಸಿದೆ ಪುಣ್ಯವಿಲ್ಲದ ಪಾಪಿಯ ಹೆಣ್ಣು ಜನ್ಮದಲ್ಲಿ' ಎನ್ನುವ ನೀಲಮ್ಮನ ವಚನದ ಸಂಧಿಗ್ಧತೆಗಳು ಹಲವಾರು ವಿಷಯಗಳನ್ನು ಕಟ್ಟಿಕೊಡುತ್ತವೆ.

ಶ್ರೇಣೀಕರಣದ ಸಮಾಜದಲ್ಲಿ ಮೇಲಸ್ತರದ ನಂಬಿಕೆಗಳು ಕೆಳಗಿನವರೆಗೂ ಇಳಿದು ಬಂದು ಬಿಡುವುದು ಸಹಜವೂ ವೈರುಧ್ಯವೂ ಅನಿಸುತ್ತದೆ. ಅಪವರ್ಗೀಕರಣವು ಪ್ರತಿ ಸಂಸ್ಕೃತಿ ನಿರ್ಮಾಣದಲ್ಲಿ ಅಗತ್ಯ ಕ್ರಿಯೆ ಆಗಿದೆ. 'ಉತ್ತಮ ಕುಲದಲ್ಲಿ, ಹುಟ್ಟಿದವನೆಂಬ ಕಷ್ಟತನದ ಹೊರೆಯ ಹೊರಿಸಿದಿರಯ್ಯ',

ಎನ್ನುವಲ್ಲಿ ಉತ್ತಮ ಕುಲ ಹೊರೆಯಾಗಿದೆ. ಪಾಪ ಪ್ರಜ್ಞೆ ಆಗಿದೆ. ಅದಕ್ಕೆ ಬಸವಣ್ಣನವರು ಸಮಾನೀಕರಣಕ್ಕಾಗಿ ತಮ್ಮನ್ನು ಕೀಳೀಕರಣಗೊಳಿಸಿಕೊಂಡಿದ್ದಾರೆ. ಅದಕ್ಕೆ 'ಚೆನ್ನಯ್ಯನ ಮನೆಯ ದಾಸಿಯ ಮಗನು ಕಕ್ಕಯ್ಯನ ಮನೆಯ ದಾಸಿಯ ಮಗಳು, ಇವರಿಬ್ಬರು ಹೊಲದಲ್ಲಿ ಬೆರಣಿಗೆ ಹೋಗಿ, ಸಂಗವ ಮಾಡಿದರು. ಇವರಿಬ್ಬರಿಗೆ ಹುಟ್ಟಿದ ಮಗ ನಾನು. ಕೂಡಲಸಂಗಮ ದೇವ ಸಾಕ್ಷಿಯಾಗಿ[೨೮] ಎಂದು ಹೇಳಿಕೊಳ್ಳುವಲ್ಲಿ ಕೆಳಮುಖ ಚಲನೆಯನ್ನು ಕಾಣಬಹುದಾಗಿದೆ. ಈ ಇಮ್ಮುಖ ಚಲನೆಗಳು ಒಮ್ಮೊಮ್ಮೆ ದೈನ್ಯ ಮತ್ತು ಅಹಂಕಾರದ ರೂಪುಗಳನ್ನು ಪಡೆಯುವ ಮಟ್ಟಕ್ಕೆ ತಲುಪಿ ಬಿಡುತ್ತವೆ. 'ಮುಂಡೆಯ ಕೈಯ ಬಾಗಿನವ ಕೊಂಡರೇನಯ್ಯ ಗಂಡನುಳ್ಳ ಗರತಿಯರು ಮೆಚ್ಚರು' ಎನ್ನುವ ಚೆನ್ನಬಸವಣ್ಣನವರ ಈ ವಚನ ಮುಂಡೆಗಿಂತ ಪುರುಷನಿದ್ದ ಸತಿಯೇ ಲೇಸು ಎಂಬ ಉಕ್ತಿ ಧ್ವನಿಸುವದು. ಆದರೆ ಇದೇ ವಿಚಾರವನ್ನು ದಾಸಿಮಯ್ಯ ಶಿವಭಕ್ತರು ಕೈಲಾಸಕ್ಕೆ ಹೋದರೆ ಅವರ ಅರಸಿಯರನ್ನು ಪಾರ್ವತಿಯ ಸಮಾನರೆಂದು ಗೌರವಿಸಬೇಕು' ಎಂದಿದ್ದಾನೆ. ಇಲ್ಲಿ ಕೆಳಸಂಸ್ಕೃತಿಯ ಕೀಳರಿಮೆಗೊಳಗಾದ ದಾಸಿಮಯ್ಯನ ಪ್ರಗತಿಪರ ವಿಚಾರ ಎದ್ದು ತೋರುವುದು.

## ೫.೫. ಆಂದೋಲನದೊಳಗಿನ ಆಂತರಿಕ ಛಿದ್ರತೆಗಳು

ಸಮಗ್ರ ವಚನ ಸಾಹಿತ್ಯವನ್ನು ಪರಿವೀಕ್ಷಿಸಿದಾಗ ಇದು ಅಸಮಾನ ಮತ್ತು ಅಮಾನವೀಯ ನಿಲುವುಗಳ ಕುರಿತು ಸಮರವನ್ನೇ ಸಾರಿತಾದರೂ ಕೆಳಸ್ತರದ ಮತ್ತು ಮೇಲ್ವರ್ಗದ ವಚನಕಾರರ ಆಶಯಗಳಲ್ಲಿ ವಿಭಿನ್ನತೆ ಎದ್ದು ತೋರುವುದು ಸತಿ-ಪತಿ, ಲಿಂಗ-ಜಂಗಮ, ಭವಿ-ಭಕ್ತ, ಅರಿವು ಕ್ರಿಯೆ, ದೇಹ ಮನಸ್ಸು, ಹೀಗೆ ಅನೇಕ ನೆಲೆಗಳ ಕುರಿತಾಗಿ ಎಲ್ಲಸ್ತರದವರು ಸ್ಪಂದಿಸಿದರೂ ಸಹ ಅವರ ಚಿಂತನೆಯ ಮೇರೆಗಳು ವಿಭಿನ್ನವಾಗಿಯೇ ಕಂಡು ಬರುವುವು.

'ಲಿಂಗವೆಂಬುದು ಕಾಯಕದ ತೊಡಕು' ಎನ್ನುವ ಅಂಬಿಗರ ಚೌಡಯ್ಯನು ಇಲ್ಲಿ ಪವಿತ್ರೀಕರಣ ಗೊಂಡಿದ್ದ ಪುಜಾ ವಿಧಾನವನ್ನೇ ಧಿಕ್ಕರಿಸಿದ್ದು ಬಹುಮುಖ್ಯ. ವ್ಯಕ್ತಿ ನೆಲೆಯಲ್ಲಿ ಕಾಣಿಸಿಕೊಂಡ ಈ ನುಡಿ ಇಡೀ ಕೆಳ ಪಾತಳಿಯ ಜನಸಮೂಹದ ಆಶಯದಂತಿದೆ. ಲಿಂಗಧಾರಣೆ, ಲಿಂಗಾಂಗ ಸಾಮರಸ್ಯದಂತಹ ಮೌಲ್ಯಿಕ ಆಚರಣೆಗಳು ಸಹ ಬಹುಶಃ ಕೆಳವರ್ಗದವರಿಗೆ ದೊರೆಯದಾಗಿವೆ. ಅಥವಾ ಶಿವಕೇಂದ್ರಿತ ನೆಲೆಯಲ್ಲಿ ಸಾಗಿದ ಈ ಚಳುವಳಿ ಒತ್ತಾಯ ಒತ್ತಡಗಳನ್ನು ತಂದಿರಲೂ ಬಹುದೆಂಬ ಶಂಕೆಯನ್ನು ಮೂಡಿಸುತ್ತದೆ. ಇಲ್ಲಿ ಅಧ್ಯಾತ್ಮಿಕ ನೆಲೆಗಿಂತ ವಾಸ್ತವದ ಬದುಕು ಬಹು ಮುಖ್ಯವಾಗಿದೆ.

'ಉಳ್ಳವರು ಶಿವಾಲಯ ಮಾಡುವರು ನಾನೇನು ಮಾಡಲಿ ಬಡವನಯ್ಯ ಎನ್ನ ಕಾಲೆ ಕಂಬ ದೇಹವೇ ದೇಗುಲ' ಎಂದು ಹೇಳುವ ಬಸವಣ್ಣ ಒಂದೆಡೆ ಆದರೆ, ದೇಹಾರವ ಮಾಡುವ ಅಣ್ಣಗಳಿರಾ ಒಂದು ತುತ್ತು ಆಹಾರವನ್ನಿಕ್ಕಿರೆ ದೇಹಕ್ಕೆ ಆಹಾರವೇ ನಿಚ್ಚಣಿಕೆ ಎನ್ನುವ ಅಂಬಿಗರ ಚೌಡಯ್ಯ ಇನ್ನೊಂದೆಡೆ. ಇಲ್ಲಿ ದೇವಾಲಯ, ಪೂಜೆ, ಪುನಸ್ಕಾರ, ದೇವ, ದೇಹ ಇವುಗಳನ್ನು ಈ ಎರಡು ವಚನಗಳು ಸಂಕೇತಿಸಿದರೂ ಕೂಡಾ ಒಬ್ಬನು ಅತೃಪ್ತಿಗೊಂಡವ ಹಸಿವಿನ ಬೇಗುದಿಗೊಳಗಾದವ, ಇನ್ನೊಬ್ಬನು ತೃಪ್ತಿಗೊಂಡವ, ಇಲ್ಲಿ ದೃಷ್ಟಿ ಭಿನ್ನತೆಗಳು ಎದ್ದು ಕಾಣುತ್ತಿವೆ. ಈ ಭಿನ್ನತೆಗಳು ಅವರ ವರ್ಗ ಸೂಕ್ಷ್ಮಗಳನ್ನು ಕಟ್ಟಿಕೊಡುವುವು.

'ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದಡೆಯೂ ಅಯ್ಯ ಎನಲಾರೆನಯ್ಯ' ಎನ್ನುವ ಈ ವಚನವನ್ನು ಅರ್ಥೈಯಿಸುವುದೆಂತು? ತನ್ನ ಹುಟ್ಟನ್ನು ಪಲ್ಲಟಗೊಳಿಸಿಕೊಂಡ ಬಸವಣ್ಣ ವ್ಯಕ್ತಿಗತ ನೆಲೆಯಲ್ಲಿ ಒಪ್ಪಿದರೂ ಈ ಭಿನ್ನತೆ ಏಕೆ? 'ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ನಿಜ್ಜನ ಒಪ್ಪುದೆ?' ಎನ್ನುವುದನ್ನು ಏನೆಂದು ಗ್ರಹಿಸುವದು. ಸೂಳೆಗೆ ಹುಟ್ಟಿದ ಕೂಸು ಉತ್ತಮಿಕೆಯನ್ನು ಪಡೆಯಲಾರನೆ? ಹಾಗದರೆ 'ಮೇಲಾಗಲೊಲ್ಲನು' ಎಂದು ಮತ್ತೆ ಮತ್ತೆ ತನ್ನನ್ನು ಕೀಳೀಕರಣಕ್ಕೊಳ ಪಡಿಸಿಕೊಂಡದ್ದೇಕೆ? ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಪಾವಿತ್ರ ನಾಶಕ್ರಿಯೆಯಲ್ಲಿ ತೊಡಗುವವರು 'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸಿದರಯ್ಯ' ಎನ್ನುವ ಅತಂಕ ಅಳುಕು ಪಟ್ಟಿದ್ದೇಕೆ? ಈ ಪ್ರಶ್ನೆಗಳು ಆಂದೋಲನದೊಳಗಿನ ಆಂತರಿಕ ಭಿನ್ನತೆಗಳನ್ನು ಕಟ್ಟಿಕೊಡುತ್ತದೆ.

ಅಲೌಕಿಕ ಬದುಕಿಗೆ ಕುಟ್ಟುಬಿದ್ದ ಅಕ್ಕಮಹಾದೇವಿಗೆ ದೇಹ ಕೇಡಿನ ಸಂಕೇತವಾಗಿ ಹೇಯವಾಗಿ ಕಾಣಿಸಿದರೆ ಕೆಳವರ್ಗದ ಕೌಟುಂಬಿಕ ನೆಲೆಯಿಂದ ಹೊರಗುಳಿದ ಸೂಳೆ ಸಂಕವ್ವೆಯಂಥವರಿಗೆ ದೇಹವೇ ಸಾಧನೆಯ ಮೂಲವಾಗಿತ್ತು. ವ್ಯವಸ್ಥೆಯ ಅನಿವಾರ್ಯತೆಯನ್ನು ಪೂರೈಸುತ್ತ ತನ್ನತನವನ್ನು ಅಧ್ಯಾತ್ಮಿಕ ಔನ್ನತ್ಯದ ನೆಲೆಯಲ್ಲಿ ಕಟ್ಟಲು ಹಂಬಲಿಸಿದ್ದು ಸಾಮಾನ್ಯವೇನಲ್ಲ. ಇಲ್ಲಿ ಸೂಳೆ ವೃತ್ತಿಗೆ ಘನತೆಯನ್ನು ತಂದುಕೊಟ್ಟ ಭಾವ ವ್ಯಕ್ತವಾಗುತ್ತದೆ.

'ವಶಿಷ್ಠಗೋತ್ರದಲ್ಲಿ ಹುಟ್ಟಿದವನು ವಶಿಷ್ಠ ಗೋತ್ರದವನು. ಕಾಶ್ಯಪ ಗೋತ್ರದಲ್ಲಿ ಹುಟ್ಟಿದವನು ಕಾಶ್ಯಪ ಗೋತ್ರದವನು ಎಂಬಂತೆ ಬ್ರಾಹ್ಮಣನ ಮಗ ಬ್ರಾಹ್ಮಣ, ಕ್ಷತ್ರಿಯನ ಮಗ ಕ್ಷತ್ರಿಯ, ಶೈವನ ಮಗ ಶೈವ  ಈ ಪರಿತಪ್ಪುದು' ಎಂದು ಉರಿಲಿಂಗ ಪೆದ್ದಿ ಜಾತಿಗೋತ್ರಗಳು ವೃತ್ತಿಯಾಧಾರಿತ. ಅವು ಎಂದೂ ಉಲ್ಲಂಘನೆಗೊಳ್ಳಲು ಸಾಧ್ಯವಿಲ್ಲವೆಂದರೆ ಶೆಟ್ಟಿಯೆಂಬಂನೆ ಸಿರಿಯಾಳನ, ಮಡಿವಾಳ

ನೆಂಬನೇ ಮಾಚಯ್ಯ ಆನು ಹಾರುವನೆಂದರೆ ಕೂಡಲ ಸಂಗಮದೇವನಾಗವನಯ್ಯ ಎನ್ನುವಲ್ಲಿ ವೈರುಧ್ಯಗಳಿವೆ.

ಈ ಚಳುವಳಿಯಿಂದ ಪರಂಪರಾಗತವಾಗಿ ಅಧೀನಗೊಂಡಿದ್ದ ಕೆಳಪಾತಳಿಯ ಆಶಯಗಳಿಗೆ ಖಚಿತ ಆಕೃತಿ ದೊರೆತದ್ದು ನಿಜವೇ ಆದರೂ ಲಿಂಗಸಮಾನತೆ, ಸ್ವಾತಂತ್ರ್ಯ ಅಭಿವ್ಯಕ್ತಿ ಕ್ರಮದಲ್ಲಿ ಅಂತರಿಕ ಭಿನ್ನತೆಗಳು ಎದ್ದು ಕಾಣುವವು.

ಧರ್ಮ ಮತ್ತು ನೈತಿಕತೆಗಳನ್ನು ಕೇಂದ್ರದಲ್ಲಿಟ್ಟುಕೊಂಡು ವಚನ ಸಂಸ್ಕೃತಿ ಬೆಳೆಯಿತಾದರೂ ಅನೇಕ ಸೂಕ್ಷ್ಮ ಭೇದಗಳನ್ನು ಒಡಲೊಳಗಿಟ್ಟುಕೊಂಡೆ ಮುಂದುವರಿದಿದ್ದಂತೂ ನಿಜ. ಮಾದಾರಚೆನ್ನಯ್ಯ, ನುಲಿಯ ಚೆಂದಯ್ಯ, ಆಯ್ದಕ್ಕಿ ಲಕ್ಕಮ್ಮ, ಕದಿರೆ ರೆಮ್ಮವ್ವೆ, ಬಾಚಿಕಾಯಕದ ಕಾಳವ್ವೆ, ಜೇಡರ ದಾಸಿಮಯ್ಯ ಹೀಗೆ ಎಲ್ಲರ ಹೆಸರುಗಳನ್ನು ಕಂಡಾಗ ಕಾಯಕವೇ ಮುಖ್ಯ ಎಂಬ ಮಾತು ಸ್ಪಷ್ಟವಾಗುತ್ತದೆ. ಆದರೂ ಅವರವರ ಯೋಗ್ಯತೆಗನುಗುಣವಾಗಿ ಉದ್ಯೋಗ ಬದಲಾವಣೆ ಸಾಧ್ಯವೆಂಬ ಮಾತು ಬರಲಿಲ್ಲ. ಅಂದರೆ ಭಾರತೀಯ ಸಮಾಜದ ಮೂಲನೆಲೆಗಳನ್ನು ಒಡೆಯುವ ಕೆಲಸವು ವಚನ ಚಳುವಳಿಯಿಂದಲೂ ಸಾಧ್ಯವಾಗಲಿಲ್ಲ ಎಂಬಂಶ ಕೀಳಿಕರಣಕ್ಕೊಳಗಾದ ವಚನಕಾರರು ಮತ್ತು ವಚನಕಾರ್ತಿಯರು ತಮ್ಮ ವಚನಗಳಲ್ಲಿ ಬಳಸಿಕೊಂಡ ಪ್ರತಿಮೆಗಳಿಂದ ಗುರುತಿಸಬಹುದು.

ಪುರಾತನ ಶಿವಭಕ್ತರು ಭಕ್ತಿಯ ಹೆಸರಿನಲ್ಲಿ ತಮ್ಮ ಹೆಂಡತಿಯರನ್ನು ಶಿವಭಕ್ತರಿಗೆ ಅರ್ಪಿಸಿರುವ ಕಥೆಗಳು, ಮಹಾ ಭಾರತದಲ್ಲಿ ದ್ರೌಪದಿಯನ್ನು ಪಣಕ್ಕಿಟ್ಟ ಘಟನೆ. ಹರಿಶ್ಚಂದ್ರನು ಸ್ವತಃ ತನ್ನ ಹೆಂಡತಿಯನ್ನು ಮಾರುವ ವಿಚಾರಗಳನ್ನು ತಿಳಿದಾಗ ಬಹುಶಃ ಸ್ತ್ರೀಯನ್ನು ಸಮಾಜ ಒಂದು ಸಂಪತ್ತಿನೋಪಾದಿಯಲ್ಲಿ ಕಂಡಿರುವುದು ಸ್ಪಷ್ಟಗೊಳ್ಳುವುದು. ಇಂದಿಗೂ ಕೂಡಾ ಸ್ತ್ರೀ ಸ್ವತಂತ್ರವಾಗಿ ಅಲೋಚಿಸಲಾರಳು, ಆರ್ಥಿಕವಾಗಿ ಸಬಲಗೊಂಡಿದ್ದರೂ ಸಾಮಾಜಿಕ ಸ್ಥರದಲ್ಲಿ ಆಕೆಯ ಸ್ಥಾನಮಾನಗಳು ಗೌಣವೇ ಆಗಿವೆ.

ಹೆಣ್ಣು ಗಂಡು ಎಂಬುದು ಬಹಿರಂಗ ಭೇದವೆ ಹೊರತು ಒಳಗೆ ಸುಳಿವ ಆತ್ಮ ಹೆಣ್ಣು ಅಲ್ಲ ಗಂಡೂ ಅಲ್ಲ ಎಂಬ ಮಾತು ಅನೇಕ ಶರಣರ ವಚನಗಳಲ್ಲಿ ಬಂದಿದ್ದರೂ ಈ ಅಂದೋಲನವು ಆಂತರಿಕ ಭಿನ್ನತೆಗಳನ್ನು ಮೇಳೈಸಿಕೊಂಡೆ ಬೆಳೆದದ್ದು ಸ್ಪಷ್ಟ. 'ಇಹ ಪರಕ್ಕೆ ದೂರಳಯ್ಯ' ಎನ್ನುವಲ್ಲಿ ಸ್ತ್ರೀ ಪಡೆದ ಅವಮಾನ ಶೋಷಣೆಗಳು ಎದ್ದು ತೋರುವವು. 'ಅಡವಿಯಲ್ಲಿ ಬಿಟ್ಟು ಹೋದಿರಿ ಬಸವಾ' 'ಅಡವಿಯಲ್ಲಿ ಕಂಗೆಟ್ಟ ಪಶುವಿನಂತೆ ಪ್ರಲಾಪಿಸುತ್ತಿದ್ದೆನಯ್ಯ' 'ನಾನಾರ ಹೆಸರ ಕುರು

ಹಿಡಿಯಲಯ್ಯ' ಈ ಎಲ್ಲ ಮೇಲಿನ ವಚನಗಳಲ್ಲಿ ಅರ್ಥಕ್ಕಿಂತ ಭಾವವೇ ಹೆಚ್ಚು. ಬಸವನ ಅಗಲಿಕೆ ನೀಲಮ್ಮನಿಗೆ ಭಾವ ಶೂನ್ಯತೆ ತಂದಿದೆ.

*ಅರಸಿನವನ ಮಿಂದು ಹೊಂದುಡಿಗೆಯನೆ ತೊಟ್ಟು ಪುರುಷನ*
*ಒಲವಿಲ್ಲದ ಲಲನೆಯಂತೆ ಆಗಿದ್ದೆನಯ್ಯ*[೨೫]

ಇಲ್ಲಿ ಪುರುಷನ ಸಹಾಯವಿಲ್ಲದೆ ಬದುಕಲು ಸಾಧ್ಯವಿಲ್ಲ ಎಂಬ ಮಾತು ಸ್ಪಷ್ಟಗೊಳ್ಳುವದು. ಇದರಿಂದ ಮಹಿಳೆ ಆಧ್ಯಾತ್ಮಕ ಸ್ವಾತಂತ್ರ ಹೊಂದಿದ್ದರೂ ಸಂಸಾರಿಕವಾಗಿ ಗಂಡನಿಗೆ ಅನುಕೂಲಗಳಾದ ಹೆಣ್ಣಾಗಿರಬೇಕೆಂಬುದೇ ಶರಣರ ನಿಲುವು ನಿರೀಕ್ಷೆಗಳಾಗಿದ್ದರಲೇಬೇಕು. ಸೊಳೆಯ ಮಗ ಮಾಳವ ಮಾಡಿದಡೆ ತಾಯಿಯ ಹೆಸರಾಯಿತ್ತು ತಂದೆಯ ಹೆಸರಿಲ್ಲ ಎನ್ನುವಲ್ಲಿ ವ್ಯಂಗ್ಯತೆ ಇದೆ. ತಮ್ಮನ್ನು ಹೊಲೆ ಮಾದಿಗರ ಮಕ್ಕಳೆಂದು ಕರೆದುಕೊಳ್ಳಲು ಹೆಮ್ಮೆಪಡಬಲ್ಲ ಶರಣರು ಸೂಳೆಗೆ ಹುಟ್ಟಿದ ಕೂಸಿನಂತೆ ಅಯ್ಯ ಅಯ್ಯ ಎಂದು ಕರೆಯಲಾರೆ ಎನ್ನುವಲ್ಲಿ ಹಲವು ಪ್ರಶ್ನೆಗಳು ಏಳುತ್ತವೆ.

*ಹುಸಿಯಂಕುರಿಸಿತ್ತು ಹೊಲೆಯನಲ್ಲಿ*
*ಹುಸಿ ಎರಡೆಲೆಯಾಯಿತ್ತು ಮಾದಿಗನಲ್ಲಿ*
*ಹುಸಿ ನಾಲ್ಕೆಲೆಯಾಯಿತ್ತು ಸಮಗಾರನಲ್ಲಿ*[೨೬]

ಚೆನ್ನಬಸವಣ್ಣನವರ ಈ ವಚನವನ್ನು ಅರ್ಥೈಯಿಸುವುದೆಂತು. ಕುಲವಿಲ್ಲದ ರೂಹು ಬಚ್ಚಲುದಕ ತಿಳಿದಂತೆ ಹುಲ್ಲು ಕಿಚ್ಚುನಲ್ಲ ಹೊಲೆಯ ಮೇಳಾಪದಲ್ಲೂ ಹುರುಳಿಲ್ಲ ಎನ್ನುವಾಗ ವಚನಕಾರರು ಎಲ್ಲಿ ನಿಂತುಕೊಳ್ಳುತ್ತಾರೆ? ಹೊಲತಿ ಶುದ್ಧ ನೀರು ಮಿಂದಂತಾಯಿತ್ತಯ್ಯ. ಭಕ್ತರಾಗದವರು ಹೊಲೆಯರೆ? ಹೊಲೆಯ ಎಂಬುದು ಕೆಟ್ಟತನದ ಪ್ರತೀತ ಎಂದಾದರೂ ನಂಬುವುದು ಹೇಗೆ ಈ ಪ್ರಶ್ನೆಗಳು ವಚನಾಂದೋಲನದೊಳಗಿನ ಅಂತರಿಕ ಭಿನ್ನತೆಗಳಿಗೆ ಒಳ್ಳೆ ನಿದರ್ಶನಗಳಾಗಿವೆ. ಶಿವಭಕ್ತರಾಗದೆ ಉಳಿದ ಜಾತಿಗಳನ್ನು ಇದು ತುಚ್ಛೀಕರಿಸಿದಂತಿದೆ. ಸ್ಥಾಪಿತವಾದುದನ್ನು ಮುರಿದು ಮತ್ತೆ ಕಟ್ಟುವಂತೆ ನಟಿಸುವದು ಆಳುವ ಸಂಸ್ಕೃತಿಯ ತಂತ್ರವಾದರೆ ವಿದ್ರೋಹ ಸಂಸ್ಕೃತಿಯು ಸ್ಥಾಪಿತವಾದದ್ದನ್ನು ಮುರಿದೇ ಹೊಸದೊಂದು ಕಟ್ಟುವ ಲಕ್ಷಣ ಹೊಂದಿದ್ದು ಗೋಚರಿಸುವುದು.

*ಜಂಗಮ ಭಕ್ತಿ ಗಂಡನುಳ್ಳ ಸಜ್ಜನ ಸತಿಯಂತಿರಬೇಕು*
*ಹೊಯ್ದಡೆ ಬಯ್ದಡೆ ಜರಿದಡೆ ಕೂಡಿಸಿದಡೆ*
*ನಿಂದಿಸಿದಡೆ ಅಳಿಸಿದಡೆ ಬಳಲಿಸಿದಡೆ ಇದಿರುತ್ತಿರುವ*
*ಕೊಬ್ಬಡೆ ಆ ಸಜ್ಜನ ಸತಿಯ ಗುಣಕ್ಕೆ ಕೊರತೆಯಹುದು*
*ಆ ಪುರುಷನ ದೈವವೆಂದರಿದು ಅತನ ಗುಣವ ನೋಡದೆ*
*ತನ್ನಗುಣವ ಬಿಡದೆ ಇರ್ದಡೆ ಪತಿವ್ರತೆಯನಿಸುವಳು*[೨೭]

ಇಲ್ಲಿ ಸತಿ ಪುರುಷನ ಸೊತ್ತು ಎಂಬ ಭಾವನೆ ಶರಣರಲ್ಲಿ ಹೋಗಿರಲಿಲ್ಲ ಎಂಬುದಂತು ಸ್ಪಷ್ಟ. ಪತಿವ್ರತೆ ನಿಷ್ಠೆಯೊಂದೆ ಇಲ್ಲಿ ಮುಖ್ಯ. ಸಮಾನತೆ ತಂದವರೆಂದು ಬೀಗುವ ವಚನಕಾರರು ಎಲ್ಲಿ ನಿಂತುಕೊಳ್ಳುತ್ತಾರೆ. ಗಂಡನನ್ನು ಅನುಸರಿಸಿಯೇ ಬದುಕಬೇಕೆಂಬ ಆಜ್ಞೆ ಇದೆ. ಆದರೆ ಇದಕ್ಕೆ ಪ್ರತಿರೋಧವೆಂಬಂತೆ ಡಕ್ಕೆಯ ಬೊಮ್ಮಯ್ಯನ ವಚನವನ್ನಿಲ್ಲಿ ಕಾಣಬಹುದು. 'ಸತಿಯ ಗುಣ ಪತಿ ನೋಡಬೇಕಲ್ಲದೆ.....'ಎಂದು ಸಮಾನತೆ ಮೆರೆದುದು ಕಂಡುಬರುತ್ತದೆ. 'ನಾರಿಗೆ ಗುಣವೇ ಶೃಂಗಾರ ಹಸಿದು ಬಂದ ಗಂಡನಿಗೆ ಉಣಲಿಕ್ಕದೆ ಬಡವಾದನೆಂದು ಮರುಗುವ ಸತಿಯ ಸ್ನೇಹದಂತೆ' ಇಲ್ಲಿ ಪಾರಂಪರಿಕ ಸೇವೆಯನ್ನು ಪತ್ನಿಯಿಂದ ನೀರಿಕ್ಷಿಸುವ ಭಾವನೆಯೇ ವ್ಯಕ್ತಗೊಳ್ಳುವುದು. ಜಮದಗ್ನಿಯು ರೇಣುಕೆಯ ತಲೆ ಕಡಿಸಿದ್ದು ಇಲ್ಲಿ ಮುಖ್ಯವಾಗುವದು. 'ಸೂಳಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನ ಒಪ್ಪುದೆ' ಈ ವಚನಗಳನ್ನೆಲ್ಲಾ ಗಮನಿಸಿದಾಗ 'ಶರಣರು ಸ್ತ್ರೀ ವಿಮೋಚನೆಗೆಂದೆ ಪ್ರತ್ಯೇಕ ಸ್ಥಾನವನ್ನೇನೂ ನೀಡಿದಂತೆ ಕಾಣುವುದಿಲ್ಲ. ಅವರ ಗುರಿ ಆಕಾಲದಲ್ಲಿ ಅತ್ಯಂತ ಸಹಜವಾಗಿದ್ದ ಅಧ್ಯಾತ್ಮಿಕ ಸಾಧನೆ. ಆ ಸಾಧನೆಗ್ಯೆಯಲು ಅಲ್ಲಿಯವರೆಗೆ ಅನೇಕ ಸಮಾಜಗಳು ಸ್ತ್ರೀಯರನ್ನು ನಾನಾ ಕಾರಣಗಳಿಂದ ಅನರ್ಹರನ್ನಾಗಿಸಿದ್ದವು. ಶರಣರು ಅದನ್ನು ಮುಕ್ತವಾಗಿಸಿದರು'[೩೩] ವಚನ ಚಳುವಳಿ ಎಷ್ಟೇ ಕ್ರಾಂತಿಕಾರಕವಾಗಿದ್ದರೂ ಅನ್ಯದೈವಕ್ಕೆರಗುವ ವಿಷಯದಲ್ಲಿ ಅದು ಅತ್ಯಂತ ಕಠೋರ ನಿಲುವನ್ನು ತಳೆದಿತ್ತು ಎಂಬುದು ನಿಜವೆ. ಆದರೆ ಮತಾಂತರದ ಮೂಲಕ ಮತ್ತೊಂದನ್ನು ಪಡೆಯುವ ತಮ್ಮದನ್ನು ನಿರಾಕರಿಸುವ ವಿಷಯದಲ್ಲಿ ಸಂಧಿಗ್ಧತೆಗಳು ಘರ್ಷಣೆಗಳು ಬೆಳೆದದ್ದು ಈ ಅಂದೋಲನ ಛಿದ್ರಗೊಳ್ಳಲು ಕಾರಣವಾಯಿತೆಂದೆನಿಸುತ್ತದೆ.

*ಬಸವನ ಭಕ್ತಿ ಕೊಟ್ಟನದ ಮನೆ*
*ಸಿರಿಯಾಳನ ಭಕ್ತಿ ಕಸಬುಗೇರಿ*
*ಸಿಂಧೂ ಬಲ್ಲಾಳನ ಭಕ್ತಿ ಪರವಾರ ದ್ರೋಹ*
*ಉಳಿದ ಆಟಮಾಟ ಉದಾಸೀನ ದಾಸೋಹವ ಮಾಡುವದರ*
*ದೈನ್ಯವೆಂಬ ಭೂತಸೋಂಕಿತು ಮಣ್ಣನ ಮನೆಯಶೆಟ್ಟಿ*
*ಮಾಯಾಮೋಹಿನಿ ಎಂಬ ಮಹೇಂದ್ರ ಜಾಲದೊಳಗಾಗಿ*
*ಮಾಡುವ ಮಾಟ ಭಕ್ತನಲ್ಲಿ ಉಂಡು ಉದ್ದಂಡ ವೃತ್ತಿಯಲ್ಲಿ*
*ನಡೆದವರು ಶಿವನಲ್ಲಿ ಇವರು ದೇವಲೋಕ*
*ಮರ್ತ್ಯಲೋಕಕ್ಕೆ ಹೊರಗು ಶ್ರೀ ಗಿರಿ ಚೆನ್ನಮಲ್ಲಿಕಾರ್ಜುನ*

ನನ್ನ ಭಕ್ತಿ ನಿನ್ನೊಳಗೈಕ್ಯವಾಯಿತ್ತಾಗಿ ನಿರ್ವಲಯವಾದೆ ಕಾರಣ[೩೪] ಅಕ್ಕಮಹಾದೇವಿಯ ಈ ವಚನದಲ್ಲಿ ಜಂಗಮನಿಗೆ ಹೆಂಡತಿಯನ್ನು ಅರ್ಪಿಸುವ ವಿಧಾನವನ್ನು ವಿರೋಧಿಸಿದಂತಿದೆ. ಸಮಾಜವು

ತನ್ನದೇ ಆದ ಪರಂಪರೆ ರೂಢಿಗಳಿಂದ ರೂಪಗೊಂಡಿದ್ದು ಇದು ಸ್ತ್ರೀಯ ಸ್ವಂತ ಭೂಮಿಕೆಯಲ್ಲಿ ಸಿಲುಕಿಕೊಂಡಿಲ್ಲವೆಂಬುದು ನಿಶ್ಚಿತ. ಪತ್ನಿ, ತಾಯಿ, ಗೃಹಿಣಿ ಇವೆ ಸ್ತ್ರೀಯ ಖಾಸಗಿ ಸಂಗತಿಗಳೆಂದು ಸಾವಿರಾರು ವರ್ಷಗಳಿಂದ ನಿಗದಿಪಡಿಸಿಕೊಂಡು ಬಂದಿರುವುದರಿಂದ ಸ್ತ್ರೀಗೆ ಕುಟುಂಬದಲ್ಲಿ ಪರ್ಯಾಯವಾಗಿ ಸಮಾಜದಲ್ಲಿಯೂ ಗೌಣಭೂಮಿಕೆಯೆ ಅನಿವಾರ್ಯವಾಯಿತು.[೩೫] ಹೀಗೆ ಅವಳ ವಿಶ್ವವನ್ನು ಸೀಮಿತಗೊಳಿಸಲಾಗಿದೆ. ಪರಂಪರಾಗತ ವ್ಯವಸ್ಥೆಯಲ್ಲಿ ಸ್ತ್ರೀ ತನ್ನ ಸಮಾನತೆಯ ಭೂಮಿಕೆಯನ್ನು ಅರಿತುಕೊಂಡು ಅದನ್ನು ದೊರಕಿಸಿಕೊಳ್ಳಬೇಕಾದುದು ಅಗತ್ಯವಾಗಿದೆ.

ಹೀಗೆ ಇಡೀ ವಚನ ಚಳುವಳಿಯನ್ನು ವಿವಿಧ ಆಯಾಮಗಳ ಮೂಲಕ ಪ್ರವೇಶಿಸಿದಾಗ ಹಲವಾರು ವೈರುದ್ಯಾತ್ಮಕ ಅಂಗಗಳು ಕಾಣುತ್ತವೆ. ಗಂಡ-ಹೆಂಡತಿ, ಶ್ರಮಿಕ ವರ್ಗದ ವಚನಕಾರರಿಗೂ ಮತ್ತು ಇತರೆ ವಚನಕಾರರಿಗೂ, ಅಲಕ್ಷಿತ ವಚನಕಾರ್ತಿಯರಿಗೂ ಅಲಕ್ಷಿತವಲ್ಲದ ವಚನಕಾರ್ತಿಯರಲ್ಲಿ ತಾತ್ವಿಕವಾದ ಹಲವು ಭಿನ್ನತೆಗಳನ್ನು ಕಾಣಬಹುದಾಗಿದೆ.

**ಅಡಿ ಟಿಪ್ಪಣಿಗಳು**

೧. ಬರಗೂರ ರಾಮಚಂದ್ರಪ್ಪ(ಸಂ) ಪು-೨೦;೧೯೯೩ **ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ**

೨. ಬರಗೂರ ರಾಮಚಂದ್ರಪ್ಪ(ಸಂ) ಪು-೧೭೮;೧೯೯೩ **ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ.**

೩. ---,,--- ಪು-೧೮೫; ---,,---

೪. ರಹಮತ್ ತರಿಕೆರೆ, ಪು-೮;೧೯೯೬, **ಮರದೊಳಗಣ ಕಿಚ್ಚು**

೫. ವೀರಣ್ಣ, ರಾಜೂರ (ಸಂ) ಸ.ವ.ಸ-೫ ಪು-೨೦೫;೧೯೯೩ ವ-೬೫೧

೬. ವಿಷ್ಣುನಾಯಕ ಪ್ರಮಾಣ ಪು-೪೬;೧೯೯೯

೭. ವೀರಣ್ಣ, ರಾಜೂರ (ಸಂ) **ಸಮಗ್ರ ವಚನ ಸಂಪುಟ-೫** ಪು-೩೧;೧೯೯೩ ವ-೮೬

೮. ---,,--- ಪು-೧೮೮;೧೯೯೩ ವ-೫೮೪

೯. ---,,--- ಪು-೧೭೬;೧೯೯೩ ವ-೫೪೪

೧೦. ಚಂದ್ರಶೇಖರ ಪಾಟೀಲ (ಸಂ) ಸಂಕ್ರಮಣ, ೩೨೧ ಪು-೩೭;೧೯೯೯ ಮೇ.

೧೧. ----,,----

೧೨. ವೀರಣ್ಣ ರಾಜೂರ (ಸಂ) ಸಮಗ್ರ ವಚನ ಸಂಪುಟ-೫ ಪು-೨೧೧;೧೯೯೩ ವ-೬೬೩

೧೩. ಬರಗೂರು ರಾಮಚಂದ್ರಪ್ಪ(ಸಂ) ಪು-೮೯;೧೯೯೩, ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ

೧೪. ವೀರಣ್ಣ, ರಾಜೂರ (ಸಂ) ಸಮಗ್ರ ವಚನ ಸಂಪುಟ ೧-೫ ಪು-೨೨೪;೧೯೯೩ ವ-೬೮೮

೧೫. ಎಸ್ .ವಿದ್ಯಾಶಂಕರ(ಸಂ) ಸಮಗ್ರ ವಚನ ಸಂಪುಟ-೭ ಪು-೩೦೯;೧೯೯೩ ವ-೯೮೩

೧೬. ರಹಮತ್ ತರಿಕೆರೆ, ಪು-೮೯;೧೯೯೬, ಮರದೊಳಗಣ ಕಿಚ್ಚು

೧೭. ವೀರಣ್ಣ, ರಾಜೂರ(ಸಂ) ಸಮಗ್ರ ವಚನ ಸಂಪುಟ-೫ ಪು-೭೪;೧೯೯೩ ವ-೩೯

೧೮. ಷಣ್ಮುಖಯ್ಯ ಅಕ್ಕೂರಮಠ, ಪು-೯೫;೧೯೯೪, ವಚನಕಾರರ ಪ್ರಮುಖ ಪರಿಕಲ್ಪನೆಗಳು

೧೯. ಕನ್ನಡ ಅಧ್ಯಯನ, ಸಂ-೫ ಸ.೪ ಪು-೨೨

೨೦. ರಹಮತ್, ತರಿಕೆರೆ, ಪು-೧೫೫;೧೯೯೬ ಮರದೊಳಗಣ ಕಿಚ್ಚು

೨೧. ----,,--- ಪು-೪೧;೧೯೯೬ ---,,---

೨೨. ---,,--- ಪು-೧೯೩;೧೯೯೬ ---,,---

೨೩. ವೀರಣ್ಣ, ರಾಜೂರ (ಸಂ) ಸಮಗ್ರ ವಚನ ಸಂಪುಟ-೫ ಪು-೨೧೫;೧೯೯೩ ವ-೬೬೮

೨೪. ಶೈಲಜಾ, ಉಡಚಣ, ಪು-೩೩೦;೧೯೯೧, ವಚನಕಾರರ ದೃಷ್ಟಿಯಲ್ಲಿ ಸ್ತ್ರೀ.

೨೫. ವೀರಣ್ಣ, ರಾಜೂರ (ಸಂ) ಸಮಗ್ರ ವಚನ ಸಂಪುಟ-೫ ಪು-೨೪೮;೧೯೯೩ ವ-೭೬೫

೨೬. ಶೈಲಜಾ ಉಡಚಣ ಪು-೩೦೪;೧೯೯೧ ವಚನಕಾರರ ದೃಷ್ಟಿಯಲ್ಲಿ ಸ್ತ್ರೀ

೨೭. ರಹಮತ್ ತರಿಕೆರೆ ಪು-೨೫;೧೯೯೬ ಮರದೊಳಗಣ ಕಿಚ್ಚು

೨೮. ಎಂ.ಎಂ.ಕಲಬುರ್ಗಿ(ಸಂ) ಸಮಗ್ರ ವಚನ ಸಂಪುಟ-೧ ಪು-೮೩;೧೯೯೩ ವ-೩೪೬

೨೯. ವೀರಣ್ಣ ರಾಜೂರ(ಸಂ) ಸಮಗ್ರ ವಚನ ಸಂಪುಟ-೫ ಪು-೧೬;೧೯೯೩ ವ-೩೮

೩೦. ರಹಮತ್ ತರಿಕೆರೆ ಪು-೨೦೫ ಮರದೊಳಗಣ ಕಿಚ್ಚು

೩೧. ಬಿ.ವ್ಹಿ.ಮಲ್ಲಾಪುರ (ಸಂ) ಸಮಗ್ರ ವಚನ ಸಂಪುಟ-೩ ಪು.೬೬೧;೧೯೯೩ ವ-೧೭೭೫

೩೨. ---,,--- ಪು-೪೪೦;೧೯೯೩ ವ-೧೨೫೫

೩೩. ಪಿ.ವಿ.ನಾರಾಯಣ, ಪು-೭೦ ವಚನ ಪರಿಸರ

೩೪. ವೀರಣ್ಣ, ರಾಜೂರ (ಸಂ) ಸಮಗ್ರ ವಚನ ಸಂಪುಟ-೫ ಪು-೭೭;೧೯೯೩ ವ-೨೪೮

೩೫. ಅಶ್ವಿನಿ ಧೋಂಗಡೆ(ಮೂಲ) ವಿಠಲರಾವ್ ಗಾಯಕವಾಡ್ (ಅನು) ಪು-೯೩ ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು.

ಬಹುಮುಖ ಸಂವೇದನೆವುಳ್ಳ ವಚನ ಸಂಸ್ಕೃತಿಯಲ್ಲಿ ಅಲಕ್ಷಿತ ವಚನಕಾರ್ತಿಯರು ಹಲವಾರು ರೀತಿಯಿಂದ ಉಪೇಕ್ಷೆಗೊಳಗಾದ ಸಂಗತಿಗಳು ಗ್ರಹಿಕೆಗೆ ಬರುತ್ತವೆ.

ಕೆಳಸ್ತರದ ಅಂಚಿನಲ್ಲಿರುವ ಮಹಿಳೆಯರು ಕೂಡಾ ತಮ್ಮ ಸುತ್ತಲಿನ ಸಾಮಾಜಿಕ ಕ್ರೌರ್ಯಗಳನ್ನು ಹಾಗೂ ತಮ್ಮ ವ್ಯಕ್ತಿತ್ವದ ಒಳಗಡೆಯೆ ಇರುವ ಛಿದ್ರಕ ಪ್ರವೃತ್ತಿಗಳೊಂದಿಗೆ ಹೋರಾಟ ಮಾಡಿದ್ದಂತೂ ಸ್ಪಷ್ಟ.

ಅಲಕ್ಷಿತ ವಚನಕಾರ್ತಿಯರು ವಚನಾಂದೋಲನದ ಒಳಗಡೆಯೇ ತೀವ್ರ ಬಂಡಾಯ ಪ್ರಜ್ಞೆಯುಳ್ಳ ವರಾಗಿ ಕಾಣಸುತ್ತಾರೆ. ವ್ಯಕ್ತಿ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ದಿಟ್ಟ ಹೆಜ್ಜೆ ಇಡುವ ಉಗ್ರ ಮಹಿಳಾವಾದಿಗಳಾಗಿಯೂ ಕಾಣಸುವರು.

ಮೇಲ್ವರ್ಗದ ನೆಲೆಯಲ್ಲಿ ಗುರುತಿಸಿಕೊಳ್ಳುವ ವಚನಕಾರರ ವಚನಗಳನ್ನು ಗಮನಿಸಿದಾಗ ಮಹಿಳೆ ಆಧ್ಯಾತ್ಮಿಕ ಸ್ವಾತಂತ್ರ್ಯ ಹೊಂದಿದ್ದರೂ ಕೌಟುಂಬಿಕ ನೆಲೆಯಲ್ಲಿ ಮಾತ್ರ ಗಂಡನಿಗೆ ಅನುಕೂಲಗಳಾದ ಸತಿಯಾಗಿರಬೇಕೆನ್ನುವ ನಿಯಮಗಳನ್ನು ನೀಲಮ್ಮನಂತವರಿಂದ ಅರಿಯಬಹುದಾಗಿದೆ.

ವೈದಿಕ ಮೌಲ್ಯಗಳನ್ನು ಅಪವರ್ಗೀಕರಣಗೊಳಿಸುತ್ತ ಲಿಂಗ ಸಮಾನತೆ ತರುವಲ್ಲಿ ಶಿವಕೇಂದ್ರಿತ ನೆಲೆಯಲ್ಲಿ ಲಿಂಗಾತೀತವಾಗಿ ತಮ್ಮನ್ನು ಗುರುತಿಸಿಕೊಂಡರೂ ಸಹ ಹೆಣ್ಣನ್ನು ದೌರ್ಬಲ್ಯದ ಲಕ್ಷಣವಾಗಿ ಗಂಡಸುತನವನ್ನು ಸಾಮರ್ಥ್ಯದ ಕುರುಹಾಗಿ ಗುರುತಿಸಿದ್ದು ಕಂಡುಬರುತ್ತದೆ.

ವಚನಕಾರ್ತಿಯರು ಯಜಮಾನ ಸಂಸ್ಕೃತಿ, ಕೌಟುಂಬಿಕ ಪುರುಷಾಧಿಕಾರದಂಥ ಅಸಮಾನ ನೆಲೆಗಳ ವಿರುದ್ಧ ಕಿಡಿಕಾರಿದ್ದರೂ ಕೂಡು ತಮ್ಮನ್ನು ಪುರುಷ ಮತ್ತು ಪುರುಷ ದೈವಗಳ ಮೂಲಕವೇ ಗುರುತಿಸಿಕೊಂಡಿರುವ ರೀತಿ ಕುತೂಹಲಕರವಾದದ್ದು.

ವಚನ ಸಾಹಿತ್ಯವನ್ನು ಇಡೀಯಾಗಿ ಗ್ರಹಿಸಿದಾಗ ಶ್ರೇಣಿಕರಣವನ್ನು ಮುರಿದು ಸಮಾನತೆತರುವಲ್ಲಿ ಪ್ರಯತ್ನಸಿದಾಗ್ಯೂ ಕೂಡೂ ಶಿವಭಕ್ತರಾಗದ ಜಾತಿಗಳನ್ನು ಕಂಡ ರೀತಿ ಗುಮಾಣಿ ಹುಟ್ಟಿಸುತ್ತದೆ.

ಅಲಕ್ಷಿತ ವಚನಕಾರ್ತಿಯರಲ್ಲಿ ಲಿಂಗಾಧಾರಿತ ವ್ಯವಸ್ಥೆಯನ್ನು ಮೀರಿ ಬದುಕುವ ಒಂದು ವಿಶಿಷ್ಟ್ಯ ಮನೋಭಾವವನ್ನು ಕಾಣುತ್ತೇವೆ.

ಇಲ್ಲಿ ಕಂಡುಬರುವ ಶ್ರಮಿಕವರ್ಗದ ಸ್ತ್ರೀ ಸಂವೇದನೆಗಳು ಮೇಲ್ವರ್ಗದ ಮಹಿಳೆಯ ಸಂವೇದನೆಗಳಿಗಿಂತ ತೀರ ವಿಭಿನ್ನ ಸ್ವರೂಪದವುಗಳಾಗಿವೆ.

ಧರ್ಮ ಮತ್ತು ನೈತಿಕತೆಗಳನ್ನು ಕೇಂದ್ರದಲ್ಲಿಟ್ಟುಕೊಂಡು ವಚನ ಸಂಸ್ಕೃತಿ ಬೆಳೆಯಿತಾದರೂ ಅನೇಕ ಸೂಕ್ಷ್ಮಭೇದಗಳನ್ನು ಒಳಗೊಂಡಿರುವುದು ಕಂಡುಬರುತ್ತದೆ.

ವಚನಕಾರ್ತಿಯರಲ್ಲಿ ಪುರುಷಾಧಿಕಾರದ ನೆಲೆಗಳನ್ನು ವಿರೋಧಿಸಿ ವಿರಕ್ತಿಯ ನೆಲೆಯಲ್ಲಿ ಬದುಕುವ, ಕೌಟುಂಬಿಕ ಬದುಕನ್ನು ಒಪ್ಪಿಕೊಂಡೆ ಆಧ್ಯಾತ್ಮಿಕತೆಯತ್ತ ಸಾಗುವ ಮತ್ತು ಕೌಟುಂಬಿಕ ನೆಲೆಯಿಂದ ಹೊರಗುಳಿದುಕೊಂಡೆ ಆಧ್ಯಾತ್ಮಿಕ ಅನುಭವಕ್ಕೆ ಹಾತೊರೆಯುವ ಸ್ತ್ರೀ ವ್ಯಕ್ತಿತ್ವಗಳು ಕಾಣದೊರೆಯುತ್ತವೆ.

ಭಕ್ತನನ್ನು ವ್ರತ ಪ್ರಧಾನವಾಗಿ ಗ್ರಹಿಸುವ ನೆಲೆಗಳು ವಚನ ಚಳುವಳಿಯಲ್ಲಿ ಪ್ರಧಾನವಾಗಿದ್ದರೂ ಸಹ ಕೆಳವರ್ಗದ ವಚನಕಾರರಲ್ಲಿ ಇದು ಮಸುಕಾಗಿ ಕಾಣುವುದು. ಇವರಿಗೆ ವ್ರತ ನೇಮಗಳಿಗಿಂತ ಕ್ರಿಯೆಯೇ ಮುಖ್ಯವಾಗಿತ್ತು. ಅರಿವು ಕ್ರಿಯೆಗಳಸಾಂಘೀಕರಣ ಅವರದಾಗಿತ್ತು.

ಮೇಲ್ವರ್ಗದ ವಚನಕಾರರು ತಮ್ಮನ್ನು ಎಷ್ಟೇ ಕೀಳಿಕರಣಕ್ಕೊಳಪಡಿಸಿಕೊಂಡರೂ ಸಹ ಕೆಳವರ್ಗದವರಲ್ಲಿ ಕಾಣಿಸಿಕೊಂಡ ನೋವು ಸಂಕಟ ಬೇಗುದಿಗಳ ವಿಷಯದಲ್ಲಿ ಪರಸ್ಪರರಲ್ಲಿ ಗುಣಾತ್ಮಕ ವ್ಯತ್ಯಾಸಗಳು ಕಂಡುಬರುತ್ತವೆ.

ಹೆಣ್ಣು ಅಪವಿತ್ರಳು ತೊತ್ತು, ಸೇವಕಿ ಎನ್ನುವಂತಹ ಅಪಮಾನ ಪರಿಸ್ಥಿತಿಯಲ್ಲಿ ಹೆಣ್ತನವನ್ನು ವಚನಕಾರರು ಮೇಲೆ ಹೇರಿಕೊಂಡು ಕಲ್ಪನೆಯಿಂದಲಾದರೂ ಹೆಣ್ತನವನ್ನು ಅನುಭವಿಸಿದ್ದು ಬಹುಮುಖ್ಯ ವಿಚಾರ.

ಇಲ್ಲಿ ಕಂಡುಬರುವ ಕೆಳವೃತ್ತಿಯ ಸ್ತ್ರೀ ವ್ಯಕ್ತಿತ್ವಗಳು ವೃತ್ತಿಯ ಕೀಳಿರಿಮೆಯಿಂದ ಸಾಯದೆ ಅದನ್ನು ಆತ್ಮಾಭಿಮಾನದ ಸಾಧನವನ್ನಾಗಿ ಮಾಡಿಕೊಂಡು ಸೂಳೆ ವೃತ್ತಿಗೂ ಘನತೆಯನ್ನು ತಂದುಕೊಟ್ಟು ಆಧ್ಯಾತ್ಮಿಕ ಸಾಕ್ಷಾತ್ಕಾರಕ್ಕೆ ಅದನ್ನು ಸಾಧನವಾಗಿಸಿಕೊಂಡರು.

ವಚನಾಂದೋಲನದಲ್ಲಿ ಅಧೀನಗೊಂಡ ಸಂಸ್ಕೃತಿಗಳು ತಮಗೆ ಕೇಡು ಬಯಸುವ ಸಾಂಸ್ಕೃತಿಕ ಆಕೃತಿಗಳನ್ನು ನೇರವಾಗಿ ಪ್ರಶ್ನಿಸಿ ಪವಿತ್ರೀಕರಿಸಲ್ಪಟ್ಟ ಆಕೃತಿಗಳ ಪಾವಿತ್ರ್ಯನಾಶ ಮಾಡಿ ತಮ್ಮ ದುಡಿಮೆಯ ವಸ್ತುಗಳನ್ನೆ ಘನೀಕರಿಸಿ ಅದಕ್ಕೆ ಆಧಾತ್ಮೀಕ ಎತ್ತರವನ್ನು ತಂದುಕೊಟ್ಟರು.

ಮೇಲ್ವರ್ಗದ ವಚನಕಾರರು ತಮ್ಮನ್ನು ತಾವು ಎಷ್ಟೇ ಕೀಳೀಕರಿಸಿಕೊಂಡಾಗ್ಯು ಕೆಳವರ್ಗದವರ ತಹತಹ, ತೀವ್ರತೆ, ತುರ್ತುಗಳನ್ನು ಅವರ ವಚನಗಳಲ್ಲಿ ಕಾಣಲು ಸಾಧ್ಯವಾಗುತ್ತಿಲ್ಲ.

ಇಂದಿನ ಸ್ತ್ರೀವಾದಿಗಳು ಎತ್ತುವ ಶ್ರಮ ಸಮಾನತೆ, ಸಮಾನ ಜವಾಬ್ದಾರಿಗಳಂತಹ ಸಂಗತಿಗಳನ್ನು ಹನ್ನೆರಡನೆ ಶತಮಾನದ ಅಲಕ್ಷಿತ ವಚನಕಾರ್ತಿಯರಲೇ ಕಾಣಬಹುದಾಗಿದೆ.

ಈ ಚಳುವಳಿಯ ಪರಿಣಾಮವಾಗಿ ಅಲಕ್ಷಿತವಾಗಿ ಉಳಿದ್ದ ಎಷ್ಟೋ ಸ್ತ್ರೀ ಸಂವೇದನೆಗಳು ತಮ್ಮ ಅನುಭವಗಳನ್ನು ಅಭಿವ್ಯಕ್ತಿಗೊಳಿಸಿಕೊಳ್ಳುವ ಅವಕಾಶ ಪಡೆದವು.

ಇಲ್ಲಿ ಕಂಡುಬರುವ ಸ್ತ್ರೀ ಭೂಮಿಕೆಗಳು ಕಾಯಕ ಜೀವಿಗಳೇ ಆಗಿದ್ದು ತಮ್ಮನ್ನು ತಾವು ಪ್ರತ್ಯೇಕ್ಷಿಕರಿಸಿಕೊಂಡು ತಮ್ಮ ಪತಿಯಂದಿರನ್ನೇ ಎಚ್ಚರಿಸಿ ಸನ್ಮಾರ್ಗದಲ್ಲಿ ಮುನ್ನಡೆಯುವಂತೆ ಮಾಡಿ ತಮ್ಮ ಬದುಕಿನಿಂದಲೇ ಸಮಾನತಾ ತತ್ವವನ್ನು ಬೆಳೆಸಿಕೊಂಡವರು. ಇವರಲ್ಲಿ ಅಹಂಮಿಕೆ ಇಲ್ಲ.

ಅಲಕ್ಷಿತ ವಚನಕಾರ್ತಿಯರ ಬದುಕು ಬರಹಗಳು ಆಧುನಿಕ ಬದುಕಿನ ಎಷ್ಟೋ ದಾಂಪತ್ತಿಕ ಅವಘಡಗಳಿಗೆ ಪರಿಹಾರಗಳನ್ನು ಗರ್ಭೀಕರಿಸಿಕೊಂಡಿದೆ ಎಂದರೆ ಉತ್ಪ್ರೇಕ್ಷೆಯೆನಿಸದು.

ಬಹುಸಂಸ್ಕೃತಿಗಳು ಶಿವಸಂಸ್ಕೃತಿಯ ನೆಲೆಯಲ್ಲಿ ಬದುಕಿದರೂ ತನ್ನ ಮೂಲ ವೃತ್ತಿ ಪ್ರವೃತ್ತಿಗಳನ್ನು ಬಿಟ್ಟುಕೊಡದೆ ಸ್ವಾಭಿಮಾನ, ಸಮಾನತೆಗಳನ್ನು ಮೆರೆದದ್ದು ಬಹುಮುಖ್ಯವಾಗಿರುತ್ತದೆ.

ವೃತ್ತಿಗಳಿಗೆ ಮತ್ತು ವೃತ್ತಿಪರ ಜಾತಿಗಳಿಗೆ ಘನತೆಯನ್ನು ತಂದುಕೊಡಲು ವಚನಕಾರರು ಪ್ರಯತ್ನಿಸಿದ್ದಾಗ್ಯೂ ಅಂತಿಮವಾಗಿ ವೃತ್ತಿ ಜಾತಿಗಳ ಜಾಡನ್ನು ಪೂರ್ಣವಾಗಿ ಕಿತ್ತು ಹಾಕಲು ಸಾಧ್ಯವಾಗಲಿಲ್ಲ.

ವೃತ್ತಿ ಸಮಾನತೆ, ಲಿಂಗ ಸಮಾನತೆ, ಆರ್ಥಿಕ ಸಮಾನತೆ, ಕಾಯಕದಿಂದಲೇ ಮುಕ್ತಿ, ಜಾತಿಮುಕ್ತ ಸಮಾಜದಂತಹ ನುಡಿಗಳನ್ನು ನುಡಿದು ನಡೆದ ಅನುಭವಪೂರ್ಣ ವಚನಗಳು ಇಂದಿನ ಸಂಕೀರ್ಣಮಯ ವರ್ತಮಾನದ ಬದುಕಿಗೆ ಆದರ್ಶನೀಯ ಎನಿಸಿವೆ.

ವಚನಗಳಲ್ಲಿ ಕಂಡುಬರುವ ಪ್ರತಿಮೆಗಳು ಜನ ಜೀವನದ ದೈನಂದಿನ ಅನುಭವಗಳನ್ನು ಬಿಂಬಿಸುವವು ಅಲ್ಲದೆ ಮನುಷ್ಯ ಜೀವನದ ಸ್ವಾಭಾವಿಕ ಜೀವಂತಿಕೆಯ ಸಂಕೇತಗಳಾಗಿವೆ.

ಲಿಂಗ, ಜಂಗಮ, ಪಾದೋದಕ ಎಂದು ಪವಿತ್ರೀಕರಣಗೊಂಡ ಪರಿಕಲ್ಪನೆಗಳನ್ನು ಬದುಕಿನ ನೆಲೆಯಲ್ಲಿ ನಿಂತು ವಿಭಿನ್ನವಾಗಿ ಅರ್ಥೈಸಿದರು.

ಅಲಕ್ಷಿತ ವಚನಕಾರ್ತಿಯರ ಈ ಅಧ್ಯಯನವು ಒಂದು ಸಾಂಸ್ಕೃತಿಕವಾದ ಸಂಕಥನವನ್ನು ಕಟ್ಟಿಕೊಡಲು ಪ್ರಯತ್ನಿಸಿದೆ. ಸಮಾನ ದಮನಕ್ಕೊಳಗಾಗಿದ್ದರೂ ಪ್ರತಿರೋಧದೊಡನೆ ತನ್ನ ಎಲ್ಲ ಆಂತರಿಕ ಚಲನೆಗಳೊಡನೆ ಭಿನ್ನವಾಗಿಯೇ ಇಲ್ಲಿನ ಸಮುದಾಯಗಳು ಕಾಣಿಸುತ್ತವೆ. ಅಷ್ಟೆ ಏಕೆ ಗಂಡ ಹೆಂಡತಿಯ ಮಧ್ಯೆಯೂ ಗುಣಾತ್ಮಕವಾದ ವ್ಯತ್ಯಾಸಗಳನ್ನು ಗೋಚರಿಸುತ್ತವೆ.

ವಿಶೇಷವಾಗಿ ಕೆಳಸ್ತರ ಹೆಣ್ಣುಮಕ್ಕಳು ವ್ಯವಸ್ಥೆಯ ವಿರುದ್ಧ ತಮ್ಮ ಅಭಿವ್ಯಕ್ತಿ ಶಕ್ತಿಯನ್ನು ಬಳಸಿದ್ದು ಒಂದು ಚಾರಿತ್ರಿಕ ಸತ್ಯ. ಕೆಳ ಸಂಸ್ಕೃತಿಯ ವಿವಿಧ ಸೂಕ್ಷ್ಮಗಳನ್ನು ಹೊತ್ತು ತೋರುವ ವಚನಕಾರ್ತಿಯರ ವಚನಗಳು ಸ್ವಯಂಪೂರ್ಣ ಪಠ್ಯಗಳೇ ಆಗಿವೆ. ಕೆಳಸಂಸ್ಕೃತಿಯ ದಟ್ಟ ಅನುಭವ ಮತ್ತು ಕೀಳೀಕರಣಗೊಂಡ ವಸ್ತುಗಳ ಘನೀಕರಣದಿಂದಾಗಿ ವಚನಗಳು ಜೀವಂತ ವಾಗುಳಿಯುತ್ತವೆ. ಹೀಗಾಗಿ ನಮ್ಮ ಸಾಂಸ್ಕೃತಿಕ ಹುಡುಕಾಟಗಳಿಗೆ ವಾಗ್ವಾದಗಳಿಗೆ ವಚನಗಳು ಉತ್ತರ ನೀಡುತ್ತವೆ. ಹಾಗೆ ಪ್ರಶ್ನೆಗಳನ್ನೂ ಕೇಳುತ್ತವೆ.

ಇಲ್ಲಿ ಕಾಣುವ ಹೆಣ್ತನದ ಲಕ್ಷಣಗಳು ಬರೀ ಸಾಂಪ್ರದಾಯಿಕ ಮಾಸೆಯಲ್ಲಿ ಬೆಳೆದು ಬಂದು ಅಸಹಾಯಕ ಪ್ರಮೇಯಗಳಾಗಿದೆ. ತನ್ನ ಪರಿಸರದಿಂದಲೇ ಗಟ್ಟಿತನವನ್ನು ಪಡೆದುಕೊಳ್ಳುವ ರೀತಿ ಗಮನಾರ್ಹ. ಸಾಮಾನ್ಯವಾಗಿ ನಾವು ಮಾಡುವ ಅಧ್ಯಯನಗಳು ಪ್ರತಿಷ್ಠತೆಯ ಬಿನ್ನುಹತ್ತಿ ಕೆಳಸಂಸ್ಕೃತಿಗಳನ್ನು ಜಾರಿಯಲ್ಲಿರುವ ಪ್ರತಿಷ್ಠಿತ ಅಧ್ಯಯನದ ಮಾದರಿಗಳಿಂದಲೇ ನಿರ್ವಚಿಸುತ್ತವೆ.

ಬುದ್ಧಿವಂತಿಕೆಯ ಪ್ರದರ್ಶನಕ್ಕೆ ಬರಹವನ್ನು ಸಂಕೀರ್ಣಗೊಳಿಸುವ ಅನಾವಶ್ಯಕವಾಗಿ ಅನ್ಯಭಾಷೆಯ ತುಣುಕುಗಳನ್ನು ಬಳಸಿ ಇದು 'ನಮ್ಮ ಸಂಸ್ಕೃತಿ' ಎಂದು ದುಂಡಾಗಿ ಗ್ರಹಿಸುತ್ತವೆ.

ವಚನಕಾರ್ತಿಯರ ಒಂದು ವಿಶಿಷ್ಟತೆ ಎಂದರೆ ಇಂಥ ಪ್ರತಿಷ್ಠಿತ ಮಾದರಿಗಳನ್ನು ಮುರಿದದ್ದು. ಪವಿತ್ರೀಕೃತಗೊಂಡ ಆಕೃತಿಗಳನ್ನು ವಿಕೃತಗೊಳಿಸಿದ್ದು. ಆ ಮೂಲಕ ಅದರ ಕ್ರೌರ್ಯಗಳನ್ನು ಬಿಚ್ಚಿಟ್ಟಿದ್ದು. ಈ ಎಲ್ಲ ಕೆಲಸಗಳಿಗೆ ಅವರು ಬಳಸಿಕೊಳ್ಳುವುದು ಸ್ವಾಭಿಮಾನವನ್ನು, ಆತ್ಮಗೌರವವನ್ನು. ತನ್ನ ವೃತ್ತಿ ಮತ್ತು ಪರಿಕರ, ಪರಿಸರಗಳನ್ನು ಜಾಗೃತಗೊಳಿಸುವ ಮೂಲಕ ತಮ್ಮ ವಿಚಾರಗಳ ಮಂಡಣೆಗೆ ಅವನ್ನು ಸಾಧನವಾಗಿಸಿಕೊಂಡರು. ತುಚ್ಛೀಕರಣಗೊಂಡ ಆ ಕೃತಿಗಳು ಸಾಹಿತ್ಯಿಕವಾಗಿ ಸಾಂಸ್ಕೃತಿಕವಾಗಿ ಅರ್ಥಪೂರ್ಣ ರಚನೆಗಳನ್ನಾಗಿಸಿ ಜ್ಞಾನ ಪರಂಪರೆಯನ್ನು ಮೇಲಕೆತ್ತಿದರು.

ಸ್ತ್ರೀವಾದಿ ಸಂವೇದನೆಯ ಹಿನ್ನೆಲೆಯಲ್ಲಿ ಗ್ರಹಿಸುವ ಮೂಲಕ ವಚನಕಾರ್ತಿಯರನ್ನು ಒಂದು ಮಿತಿಗೆ ಒಳಪಡಿಸಿದರೂ ಹೊಸದಾದ ಅನುಭವ ಜಗತ್ತನ್ನು ಪ್ರವೇಶಿಸಿದ ಸಮಾಧಾನ ನನಗಾಗಿದೆ. ಸ್ತ್ರೀವಾದ ಮತ್ತು ಚಳುವಳಿಗೆ ಪೂಷಕವಾಗಿರಬಲ್ಲ ಕ್ರಾಂತಿಕಾರಕವಾದ ವಿಚಾರಗಳನ್ನು ಎತ್ತಿ ತೋರಿಸಿದ ಪ್ರಾಮಾಣಿಕ ಪ್ರಯತ್ನ ಎಂಬ ಹೆಮ್ಮೆ. ಇಷ್ಟೆಲ್ಲಾ ಇತಿಮಿತಿಗಳ ಮಧ್ಯೆಯೂ ಒಂದು ವಿಚಾರಪೂರ್ಣ ಪ್ರಬಂಧ ಬರೆದ ತೃಪ್ತಿ ನನಗಾಗಿದೆ.

# ಗ್ರಂಥ ಋಣ

ಅಶ್ವಿನಿ ಧೋಂಗಡೆ (ಅನು), ವಿಠಲರಾವ್ ಗಾಯಕ್ವಾಡ್, ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ

ಇಮ್ಮಡಿ ಶಿವಬಸವ ಸ್ವಾಮಿಗಳು, ಶರಣತತ್ವ ಚಿಂತನ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಜೆ.ಎಸ್.ಎಸ್.ಮಹಾವಿದ್ಯಾಪೀಠ, ರಾಮಾನುಜ ರಸ್ತೆ, ಮೈಸೂರು ೫೭೦ ೦೦೪

ಕಲಬುರ್ಗಿ ಎಂ.ಎಂ.(ಸಂ), ಸಂಕೀರ್ಣ ವಚನ ಸಂಪುಟ ೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

ಕೇಶವ ಶರ್ಮ ಕೆ., ಕ್ರಿಯೆ ಪ್ರತಿಕ್ರಿಯೆ, ಅನ್ವೇಷಣೆ ಪ್ರಕಾಶನ, ೪೫೯, ೧೧ನೇ ಮುಖ್ಯರಸ್ತೆ, ಎಂ.ಸಿ.ಬಡಾವಣೆ, ವಿಜಯನಗರ, ಬೆಂಗಳೂರು

ಗಾಯತ್ರಿ ಎನ್., ಮಹಿಳಾ ಚಳುವಳಿಯ ಮಜಲುಗಳು, ೧೯೯೮, ನವಕರ್ನಾಟಕ ಪ್ರಕಾಶನ, ಬೆಂಗಳೂರು

ಚೆನ್ನಕ್ಕ ಪಾವಟೆ, ವಚನ ಸನ್ನಿಧಿ, ೧೯೯೩, ಚೆನ್ನಗಂಗಾ ಪ್ರಕಾಶನ, ಧಾರವಾಡ ೮.

ಜವರಯ್ಯ ಮ.ನ., ದಲಿತ ವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ, ೧೯೯೭, ಸಿದ್ಧಾರ್ಥ ಗ್ರಂಥಮಾಲೆ ನಂ.೯ ೪೭, ಮೊದಲನೆ ಹಂತ, ಕುವೆಂಪುನಗರ, ಮೈಸೂರು

ಜಾನ್ ಪೀಟರ್ ಶೌಬನ್(ಅನು), ಟಿ.ಆರ್.ಚಂದ್ರಶೇಖರ್, ಅನುಭಾವಗಳ ಕ್ರಾಂತಿ, ೧೯೯೯, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ

ತಿಪ್ಪೇರುದ್ರಸ್ವಾಮಿ ಎಚ್., ವಚನ ಚಳುವಳಿ, ೧೯೮೭, ಶ್ರೀ ಶರಣಬಸವೇಶ್ವರ ಗ್ರಂಥ ವಿಶ್ವವಿದ್ಯಾಲಯ, ಗುಲಬರ್ಗಾ

ತಿಪ್ಪೇರುದ್ರಸ್ವಾಮಿ ಎಚ್. ವಚನ ಸಾಹಿತ್ಯ ವೈಚಾರಿಕ, ೧೯೮೫, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ತಿಪ್ಪೇರುದ್ರಸ್ವಾಮಿ ಎಚ್. ಶರಣರ ಅನುಭವ, ೧೯೯೩, ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು

ತೇಜಸ್ವಿ ನಿರಂಜನ, ಸಿಮಂತಿನಿ ನಿರಂಜನ(ಸಂ), ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ೧೯೯೪, ಕನ್ನಡ ಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು

ನಾರಾಯಣ ಪಿ.ವಿ., ವಚನ ವ್ಯಾಸಂಗ, ೧೯೮೨, ಭಾಗ್ಯ ಲಕ್ಷ್ಮಿ ಪ್ರಕಾಶನ, ನಂ.೫೨೪, ಶ್ರೀನಗರ ಮುಖ್ಯರಸ್ತೆ, ಬನಶಂಕರಿ ಮೊದನೆ ಘಟ್ಟ, ಬೆಂಗಳೂರು

ನಾರಾಯಣ ಪಿ.ವಿ., ವಚನ ಪರಂಪರೆ, ೧೯೯೪, ತಂಗಾಳಿ ನಂ.೨೦, ಆರ್.ಬಿ.ಐ.ಕಾಲೋನಿ, ಜಯನಗರ, ೩ನೇ ಬ್ಲಾಕ್, ಬೆಂಗಳೂರು.

ನಾರಾಯಣ ಪಿ.ವಿ., ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ೧೯೮೨, ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ

ನಾರಾಯಣ ಪಿ.ವಿ., ವಚನ ಚಳುವಳಿ ೧೯೮೧, ಶ್ರೀ ಸರ್ಪಭೂಷಣ ಶಿವಯೋಗಿಶ್ವರ ಗ್ರಂಥಮಾಲೆ ಕೆಂಪೇಗೌಡ ವೃತ್ತ, ಬೆಂಗಳೂರು

ನಾರಾಯಣ ಪಿ.ವಿ., ವಚನ ನಿರ್ವಚನ, ೧೯೯೦, ಪುಸ್ತಕಾಲಯ ಪ್ರಕಾಶಕರು, ಮೈಸೂರು

ಪಾಟೀಲ ಬಿ.ಎಸ್., ಅನುಭಾವಿಗಳ ಅಮೃತ್ತವಾಣಿ, ಶ್ರೀ ಜಗದ್ಗುರು ಧರ್ಮ ಪ್ರಚಾರಕ ಮಂಡಳ, ಮೂರು ಸಾವಿರ ಮಠ, ಹುಬ್ಬಳ್ಳಿ

ಪಾಟೀಲ ಬಿ.ಎ., ಶರಣರ ಆರ್ಥಿಕ ಚಿಂತನೆ, ಸಿ.ಎಸ್.ಕಣವಿ, ನಿರ್ದೇಶಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಭುಸ್ವಾಮಿ ಮಠ ಸಿ.ವಿ., ಬಸವಣ್ಣನವರ ವಚನಗಳ ಸಾಹಿತ್ಯಿಕ ಅಧ್ಯಯನ, ೧೯೯೬, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ

ಬಸವರಾಜ ಸಬರದ, ವಚನ ಚಳುವಳಿ, ೧೯೯೨, ಪಲ್ಲವಿ ಪ್ರಕಾಶನ, ಗುಲಬರ್ಗಾ

ಬರಗೂರು ರಾಮಚಂದ್ರಪ್ಪ(ಸಂ). ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಬರಗೂರು ರಾಮಚಂದ್ರಪ್ಪ(ಸಂ), ವಚನ ಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಬರಗೂರು ರಾಮಚಂದ್ರಪ್ಪ(ಸಂ), ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಬರಗೂರು ರಾಮಚಂದ್ರಪ್ಪ(ಸಂ), ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಬರಗೂರು ರಾಮಚಂದ್ರಪ್ಪ(ಸಂ), ಕನ್ನಡ ಸಾಹಿತ್ಯದಲ್ಲಿ ಹಿಂಸೆಯ ಸ್ವರೂಪ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಬರಗೂರು ರಾಮಚಂದ್ರಪ್ಪ(ಸಂ), ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಬಸವರಾಜ ಕಲ್ಗುಡಿ, ಅನುಭಾವ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ೧೯೯೭, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು

ಬಿಳಗಿ ಎಚ್.ಎಂ., ಶಿವಶರಣೆಯರ ಜೀವನ ಮತ್ತು ಸಾಧನೆ, ೧೯೮೯, ಸಮಾಜ ಪುಸ್ತಕಾಲಯ ಶಿವಾಜಿ ಬೀದಿ, ಧಾರವಾಡ

ಭೂಸನೂರ ಮಠ ಸಂ.ಶಿ., ವಚನ ಸಾಹಿತ್ಯಸಾರ ಸಂಗ್ರಹ, ೧೯೯೦, ಲಿ.ಶ್ರೀ ಗುರು ಅನ್ನದಾನ ಮಹಾಸ್ವಾಮಿಗಳ ಶತಮಾನೋತ್ಸವ ಸಮಿತಿ, ಹಾಲಕೆರೆ, ನೆರೇಗಲ್ಲ.

ಬುವಣ್ಣ ಹಿಂಗಮಿರೆ(ಸಂ), ಸಾಹಿತ್ಯ ವಿಮರ್ಶೆ, ೧೯೮೭, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಮನು ಚಕ್ರವರ್ತಿ ಎನ್.(ಸಂ), ಭಾರತೀಯ ಸ್ತ್ರೀವಾದ, ೧೯೯೩, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ

ಮಹದೇವಯ್ಯ ಟಿ.ಆರ್., ಶರಣ ಸೌರಭ, ಭಾಗ್ಯರವಿ, ಪ್ರಕಾಶನ, ವಿಜಯನಗರ, ಬೆಂಗಳೂರು

ಮಂಜುನಾಥ ಸಿ..ಯು. ಮತ್ತು ವೀರಪ್ಪ ವಿ.ಸಿ.(ಸಂ), ವಚನಕಾರರು ವ್ಯಕ್ತಿ ಹಾಗೂ ಅಭಿವ್ಯಕ್ತಿ, ೧೯೯೩, ಶ್ರೀ ಸರ್ಪಭೂಷಣ ಶಿವಯೋಗಿಶ್ವರ ಮಠ, ಕೆಂಪೇಗೌಡ ವೃತ್ತ, ಬೆಂಗಳೂರು.

ಮಾತೆ ಮಹಾದೇವಿ, ಬಸವತತ್ವ ದರ್ಶನ, ೧೯೬೭, ಸುಯಿಧಾನ ಸುಗ್ರಂಥಮಾಲೆ, ಜಗನ್ಮಾತ ಅಕ್ಕಮಹಾದೇವಿ ಆಶ್ರಮ, ಉಳವಿ ರಸ್ತೆ, ಧಾರವಾಡ

ಮುಕ್ತಾಯಕ್ಕ ಎಚ್.ಎಸ್., ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ, ೧೯೯೭, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಮೋಕಾಶಿ ಆರ್.ಡಿ., ಭಾರತೀಯ ಸ್ತ್ರೀಯ ಬದಲಾಗುತ್ತಿರುವ ಸ್ಥಾನಮಾನಗಳು, ೧೯೭೬, ಕುಲಸಚಿವರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಯಂಡಮೂರಿ ವೀರೇಂದ್ರನಾಥ, ಓ ಹೆಣ್ಣೇ ನೀನೆಷ್ಟು ಒಳ್ಳೆಯವಳು, ೧೯೯೪, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ

ರಹಮತ್ ತರೀಕೆರೆ, ಮರದೊಳಗಿನ ಕಿಚ್ಚು, ೧೯೯೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ

ರಹಮತ್ ತರೀಕೆರೆ, ಸಾಹಿತ್ಯ ವಿಮರ್ಶೆ, ೧೯೯೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ವೀರೇಶ ಬಡಿಗೇರ, ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು, ೧೯೮೯, ವಿಮೋಚನಾ ಪ್ರಕಾಶನ, ದೇವದಾಸಿ ಪುನರ್ವಸತಿ ಸಂಘ, ಅಥಣಿ

ವಿಜಯಶ್ರೀ ಸಬರದ, ಸಾಹಿತ್ಯ ಮಹಿಳೆ, ೧೯೮೯, ನವಕರ್ನಾಟಕ ಪ್ರಕಾಶನ, ಬೆಂಗಳೂರು

ವಿದ್ಯಾಶಂಕರ್ ಎಸ್., ಸಂಕೀರ್ಣ ವಚನ ಸಂಪುಟ ೨, ೧೯೯೩, ಕನ್ನಡ ಸಾಹಿತ್ಯ ಇಲಾಖೆ, ಬೆಂಗಳೂರು

ವಿಜಯ ದಬ್ಬೆ, ಮಹಿಳಾ ಸಾಹಿತ್ಯ ಸಮಾಜ, ೧೯೮೮, ರಚನಾ ಪ್ರಕಾಶನ, ಮೈಸೂರು ೨೩

ವೀರಣ್ಣ ರಾಜೂರು, ಶಿವಶರಣೆಯರ ವಚನ ಸಂಪುಟ ೫, ೧೯೯೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

ವಿಶ್ವನಾಥ ಎಂ.ಟಿ., ಶರಣ ದಂಪತಿಗಳು ಮತ್ತು ವಿರಾಗಿಣಿಯರು, ೧೯೯೦, ಸರ್ವಮಂಗಳ ಪ್ರಕಾಶನ, ೭೫೬, ಮನುಜ ಪಂಥ, ಎರಡನೇ ಅಡ್ಡರಸ್ತೆ, ಇ ಮತ್ತು ಎಫ್ ಬ್ಲಾಕ್ ಕುವೆಂಪುನಗರ ಮೈಸೂರು

ವಿವಿಧ ಲೇಖಕರು, ಕನ್ನಡ ಸಾಹಿತ್ಯ ಸ್ತ್ರೀವಾದಿ ಚಿಂತನೆ, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಶಿವರುದ್ರಪ್ಪ ಎ.ಎಲ್.(ಸಂ), ಶರಣತತ್ವ ಚಿಂತನ, ೧೯೮೮, ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತು, ರಾಮಾನುಜ ರಸ್ತೆ, ಮೈಸೂರು ೫೭೦ ೦೦೪

ಶಿವರುದ್ರಪ್ಪ ಜಿ.ಎಸ್.(ಸಂ), ೧೯೯೦, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಶಿವರುದ್ರಪ್ಪ ಜಿ.ಎಸ್.(ಸಂ), ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ, ೧೯೮೯, ಡಿ.ಕೆ. ಶ್ಯಾಮಸುಂದರರಾವ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಶಾಂತರಸ, ರಾಯಚೂರ, ಚೆನ್ನಬಸವಣ್ಣ ಬೆಟದೂರ(ಸಂ), ಚನ್ನಬಸವ ಪಟ್ಟದೇವರ, ಶತಮನೋತ್ಸವ ಸಮಿತಿ, ಬಾಲ್ಕಿ, ಬೀದರ್

ಶಿವಪ್ರಕಾಶ ಎಚ್.ಎಸ್., ಮೊದಲ ಕಟ್ಟಿನ ಗದ್ಯ, ೧೯೯೫, ಅಭಿನವ ೨೭೯೧, ೧೩ನೇ ಕ್ರಾಸ್, ಇ ವಿಭಾಗ, ರಾಜಾಜಿನಗರ, ೨ನೇ ಹಂತ, ಬೆಂಗಳೂರು

ಶಾಲಿನಿ ರಘುನಾಥ್, ಸಮನ್ವಿತ, ೧೯೯೪, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ

ಶೈಲಜಾ ಉಡಚಣ, ವಚನಗಳಲ್ಲಿ ಸತಿಪತಿ ಭಾವ, ೧೯೯೩, ಗ್ರಿನೋಬಲ್ಸ ಪ್ರಕಾಶನ, ಗುಲಬರ್ಗಾ

ಶೈಲಜಾ ಉಡಚಣ, ವಚನಕಾರರ ದೃಷ್ಟಿಯಲ್ಲಿ ಸ್ತ್ರೀ, ೧೯೯೩, ಗ್ರಿನೋಬಲ್ಸ ಪ್ರಕಾಶನ, ಗುಲಬರ್ಗಾ

ಶ್ರೀ ಪಂಡಿತರಾಧ್ಯ ಶಿವಬಸವಸ್ವಾಮಿಗಳು, ಸಮಕಾಲೀನತೆ ವಚನ ಸಾಹಿತ್ಯ, ೧೯೯೭, ತರಳಬಾಳು ಜಗದ್ಗುರು ಬೃಹನ್ಮಠ, ಸಿರಿಗೆರೆ, ಚಿತ್ರದುರ್ಗ ಜಿಲ್ಲೆ

ಶ್ರೀ ಪಂಡಿತರಾಧ್ಯ ಶಿವಬಸವಸ್ವಾಮಿಗಳು, ವಚನ ಸಾಹಿತ್ಯ ಮತ್ತು ಮಹಿಳೆ, ೧೯೯೭, ಅಖಿಲ ಭಾರತ ಶರಣಸಾಹಿತ್ಯ ಪರಿಷತ್ತು, ಮೈಸೂರು

ಷಣ್ಮುಖಯ್ಯ ಅಕ್ಕೂರ ಮಠ, ವಚನ ಸಾಹಿತ್ಯ ವಿವೇಚನೆ, ೧೯೯೩, ಶ್ರೀ ಜಗದ್ಗುರು ಅನ್ನದಾನೇಶ್ವರ ಸಂಸ್ಥಾನ ಮಠ, ಮುಂಡರಗಿ, ಧಾರವಾಡ ಜಿಲ್ಲೆ

ಷಣ್ಮುಖಯ್ಯ ಅಕ್ಕೂರಮಠ, ವಚನಕಾರರ ಪ್ರಮುಖ ಪರಿಕಲ್ಪನೆಗಳು, ೧೯೯೪, ಸರ್ಪಭೂಷಣ ಶಿವಯೋಗೀಶ್ವರ ಮಠ, ಕೆಂಪೇಗೌಡ ವೃತ್ತ, ಬೆಂಗಳೂರು

ಸರೋಜಿನಿ ಶಿಂತ್ರಿ, ಸ್ತ್ರೀ ನಡೆದು ಬಂದ ದಾರಿ, ೧೯೭೩, ಎಸ್.ಎಸ್.ಒಡೆಯರ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಸಿದ್ಧಯ ಪುರಾಣಿಕ, ಶರಣ ಚರಿತಾಮೃತ, ೧೯೬೪, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

ಸಿದ್ಧರ್ ವಾಯಲೇಲ್, ಹನ್ನೆರಡನೆ ಮತ್ತು ಇಪ್ಪತ್ತನೆಯ ಶತಮಾನಗಳ ವಚನ ಸಾಹಿತ್ಯ ಒಂದು ತೌಲನಿಕ ಅಧ್ಯಯನ, ೧೯೯೯, ಶಾರದ ಮಂದಿರ, ರಾಮಯ್ಯರಸ್ತೆ, ಮೈಸೂರು

ಹೀರೇಮಠ ಆರ್.(ಸಂ), ಇಪ್ಪತ್ತೇಳು ಶಿವಶರಣೆಯರ ವಚನಗಳು, ೧೯೬೮, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಹೂಗಾರ ಎಂ.ಬಿ., ಶರಣರ ಸಂಪುಟ ೪, ೧೯೯೧, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

